KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ, ಡಿಸೆಂಬರ್ ೧೧, ೨೦೦೮ (ಮಾರ್ಗಶಿರ ೨೦, ಶಕ ವರ್ಷ ೧೯೩೦) | ಸಂಚಿಕೆ ೪೯ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ:** ಶ್ರೀ ಹೆಚ್.ಪಿ. ನಾಗರಾಜ್, ಹಿಂದಿನ ತಹಶೀಲ್ದಾರ್, ರಾಣಿಬೆನ್ನೂರು, ಪ್ರಸ್ತುತ ತಹಶೀಲ್ದಾರ್ ಹರಿಹರ ತಾಲ್ಲೂಕು, ಇವರ ವಿರುದ್ಧದ ಇಲಾಖಾ ವಿಚಾರಣೆ ಬಗ್ಗೆ–ಇವರಿಗೆ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂ:ಆರ್‌ಡಿ 57 ಎಡಿಇ 2004, ದಿನಾಂಕ:30.8.2005.

2. ಶ್ರೀ ಎನ್.ಸಿ. ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ಇವರ ವಿಚಾರಣಾ ವರದಿ ದಿನಾಂಕ:20.9.2006.

3. ಎರಡನೇ ಕಾರಣ ಕೇಳುವ ನೋಟೀಸು ಸಂ:ಆರ್‌ಡಿ 57 ಎಡಿಇ 2004, ದಿನಾಂಕ:3.3.2007.

4. ಶ್ರೀ ಹೆಚ್.ಪಿ. ನಾಗರಾಜ್, ಇವರ ಲಿಖಿತ ಸಮಜಾಯಿಷಿ ದಿನಾಂಕ:13.3.2007.

**ಪ್ರಸ್ತಾವನೆ:**

ಶ್ರೀ ಹೆಚ್.ಪಿ. ನಾಗರಾಜ್, ವಿಶೇಷ ತಹಶೀಲ್ದಾರ್, ಕೆ.ಎಸ್.ಎಫ್.ಸಿ ದಾವಣಗೆರೆ ಇವರು ಈ ಹಿಂದೆ ಆಲೂರು ತಾಲ್ಲೂಕು ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:10.1.2004 ರಂದು (2ನೇ ಶನಿವಾರ) ಸಕಲೇಶಪುರ ಉಪವಿಭಾಗಾಧಿಕಾರಿಯವರಿಂದ ಪೂರ್ವಾನುಮತಿ ಪಡೆಯದೆ ಕೇಂದ್ರಸ್ಥಾನ ಬಿಟ್ಟಿರುವ ಕಾರಣ ಹಾಗೂ ದಿನಾಂಕ: 26.12.2003ರಲ್ಲಿ 20 ಪ್ರಕರಣಗಳು ಸಕ್ರಮ ಸಮಿತಿಯ ಮುಂದೆ ಮಂಡಿಸಿದ್ದು, ಆದರೆ ಭೂ ಕಂದಾಯ ನಿಯಮ–1966ರ ನಿಯಮ 108 ಸಿ(2)ರಂತೆ ಪರಿಶೀಲಿಸಿ ಅರ್ಹ ಪ್ರಕರಣಗಳ ಬಗ್ಗೆ ಸಹಿ ಮಾಡಿ ಮಂಡಿಸಬೇಕಾಗಿದ್ದು ಆದರೆ ಈ ರೀತಿ ಮಾಡಿರುವುದಿಲ್ಲ ಮತ್ತು ಸದರಿಯವರು ಈ ಹಿಂದೆ ಸಾಗರ ತಾಲ್ಲೂಕು ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಚುನಾವಣಾ ಕೆಲಸದಲ್ಲಿ ಆಸಕ್ತಿ ವಹಿಸದೆ ದಿನಾಂಕ:8–5–2004, 9–5–2004 ಮತ್ತು 10–5–2004 ರಂದು ಚುನಾವಣಾ ಕೆಲಸ ಕಾರ್ಯಗಳನ್ನು ನಿರ್ಲಕ್ಷಿಸಿದ ಆಪಾದನೆಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲಾಗಿದೆ.

ವಿಚಾರಣಾಧಿಕಾರಿಯವರು ಇಲಾಖಾ ವಿಚಾರಣೆಯನ್ನು ನಿಯಮಾನುಸಾರ ಜರುಗಿಸಿ, ಮೇಲೆ ಕ್ರ.ಸಂ(2)ರಲ್ಲಿ ಓದಲಾದ ದಿನಾಂಕ:20–9–2006ರ ಪತ್ರದೊಂದಿಗೆ ತಮ್ಮ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಕಳುಹಿಸಿದ್ದಾರೆ. ಹಾಗೂ ಇವರ ವಿರುದ್ಧ ಮಾಡಲಾಗಿರುವ ನಾಲ್ಕು ಆರೋಪಗಳು ವಿಚಾರಣೆಯಲ್ಲಿ ಸಾಕ್ಷ್ಯಾಧಾರಗಳಿಂದ ಸಾಬೀತಾಗಿರುವುದಾಗಿ ತಿಳಿಸಿದ್ದಾರೆ. ಮೇಲೆ ಕ್ರ.ಸಂ(3)ರಲ್ಲಿ ಅಧಿಕಾರಿಯವರಿಗೆ ವಿಚಾರಣಾ ವರದಿಯ ಪ್ರತಿಯನ್ನು ಲಗತ್ತಿಸಿ 2ನೇ ಕಾರಣ ಕೇಳುವ ನೋಟೀಸನ್ನು ನೀಡಲಾಗಿತ್ತು. ಇದಕ್ಕೆ ಉಲ್ಲೇಖ (4)ರಲ್ಲಿ ತಮ್ಮ ಲಿಖಿತ ಸಮಜಾಯಿಷಿಯನ್ನು ಒಪ್ಪಿಸಿರುವರು. ವಿಚಾರಣಾಧಿಕಾರಿಗಳು ದಾಖಲೆ ಹಾಗೂ ಸಾಕ್ಷಿಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಅಭಿಪ್ರಾಯ ವ್ಯಕ್ತ ಪಡಿಸಿರುತ್ತಾರೆ.

ಆಪಾದಿತ ಅಧಿಕಾರಿಯವರು ದಿನಾಂಕ:10–1–2004 ರಂದು ಅನುಮತಿ ಪಡೆಯದೆ ಕೇಂದ್ರಸ್ಥಾನ ಬಿಟ್ಟಿರುವುದು ಸ್ಪಷ್ಟವಾಗಿರುತ್ತದೆ. ವಚನ ಸಾಹಿತ್ಯ ಸಮ್ಮೇಳನದ ನೆನಪಿನ ಕಾಣಿಕೆಗಳನ್ನು ಸಿದ್ದಪಡಿಸಲು ಹಾಗೂ ತಮ್ಮ ಮಗನಿಗೆ ಹುಷಾರಿಲ್ಲದ ಕಾರಣ, ತುರ್ತು ದೂರವಾಣಿ ಕರೆಯ ಮೇರೆ ಎರಡೂ ಕೆಲಸಗಳು ಆಗುತ್ತದೆ ಎಂದು ತಾವೂ ಊರಿಗೆ ಹೋಗಿದ್ದೆನೆಂದು ಆಪಾದಿತ ಅಧಿಕಾರಿಯು ಸಮಜಾಯಿಷಿಯನ್ನು ಕೊಟ್ಟಿರುತ್ತಾರೆ. ಆಪಾದಿತ ಅಧಿಕಾರಿಯು ತಾಲ್ಲೂಕು ದಂಡಾಧಿಕಾರಿಯಾಗಿದ್ದು, ನ್ಯಾಯಾಲಯಕ್ಕೆ ಸಂಬಂಧಪಟ್ಟ ತುರ್ತು ಪ್ರಕರಣಗಳನ್ನು ನಿರ್ವಹಿಸಬೇಕಾಗಿದ್ದು ಅನುಮತಿ ಪಡೆಯದೇ ಕೇಂದ್ರಸ್ಥಾನ ಬಿಟ್ಟಿರುವುದು ಕಾನೂನು ಬಾಹಿರವಾಗಿದ್ದು,. ಇದು ಅವರ ದುರ್ನಡತೆ ಎಂಬುದರಲ್ಲಿ ಯಾವ ಅನುಮಾನ ಇರುವುದಿಲ್ಲ. ಒಂದು ವೇಳೆ ತುರ್ತು ನಿಮಿತ್ತ ಹೋಗಬೇಕಾಗಿದ್ದಲ್ಲಿ ತಮ್ಮ ಮೇಲಾಧಿಕಾರಿಗಳಿಗೆ ಅಥವಾ ಮೇಲಾಧಿಕಾರಿಗಳ ಕಚೇರಿಗೆ ಮಾಹಿತಿ ನೀಡಿ ಹೋಗಬಹುದಾಗಿತ್ತೆಂದು ತಿಳಿಸಿದ್ದಾರೆ.

ಆಪಾದಿತ ಅಧಿಕಾರಿಯ ತಮ್ಮ ಲಿಖಿತವಾದದಲ್ಲಿ ತಮ್ಮ ಮಗ ಹಾಗೂ ತಮ್ಮ ಮಾವನವರಿಗೆ ಹುಷಾರಿಲ್ಲವೆಂದು ತಮ್ಮ ಪತ್ನಿಯಿಂದ ದೂರವಾಣಿ ಕರೆ ಬಂದಿದ್ದರಿಂದ ತುರ್ತು ಅನಿವಾರ್ಯತೆಯಿಂದ ಹಾಗೆ ಹೋಗಬೇಕಾಯಿತೆಂದು ಈ ಹಿಂದೆ ಒಂದೇ ವರ್ಷದಲ್ಲಿ 2–3 ಸ್ಥಳಗಳಿಗೆ ವರ್ಗಾವಣೇ ಆದ ಕಾರಣ ತಮ್ಮ ಕುಟುಂಬವನ್ನು ತಾವು ಕರ್ತವ್ಯ ನಿರ್ವಹಿಸುವ ಸ್ಥಳಕ್ಕೆ ಕರೆದೊಯ್ಯಲು ಸಾಧ್ಯವಾಗದೇ ಇರುವುದರಿಂದ, ಮಾನವೀಯತೆ ದೃಷ್ಠಿಯಿಂದ ಈ ಆಪಾದನೆಯನ್ನು ಕೈಬಿಡಲು ತಿಳಿಸಿರುತ್ತಾರೆ. ಅನುಮತಿ ಪಡೆಯದೆ ಆಪಾದಿತ ಅಧಿಕಾರಿಯು ಕೇಂದ್ರ ಸ್ಥಾನ ಬಿಟ್ಟು ಹೋಗಿರುವುದು ಕಾನೂನು ದೃಷ್ಠಿಯಿಂದ ತಪ್ಪಾಗುತ್ತದೆ. ಇದರಲ್ಲಿ ಮಾನವೀಯತೆಯು ದೃಷ್ಠಿಕೋನಕ್ಕೆ ಅವಕಾಶ ಇರುವುದಿಲ್ಲವೆಂದು ತಿಳಿಸಿದ್ದಾರೆ.

ಆಪಾದಿತ ಅಧಿಕಾರಿಯು ತಮ್ಮ ಲಿಖಿತ ವಾದದಲ್ಲಿ ಒಂದೇ ಪ್ರಕರಣದಲ್ಲಿ ವಿಷಯ ನಿರ್ವಾಹಕರಿಬ್ಬರು ಮತ್ತು ಕಛೇರಿಯ ಶಿರಸ್ತೇದಾರರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ನಡೆಸದೇ ಕಛೇರಿಯ ಮುಖ್ಯಸ್ಥರಾದ ತಮ್ಮ ಮೇಲೆ ಮಾತ್ರ ವಿಚಾರಣೆ ನಡೆಸಲು ಉದ್ದೇಶಿಸಿರುವುದನ್ನು ಪ್ರಶ್ನಿಸಿರುತ್ತಾರೆ. ಹಾಗೂ ದಿನಾಂಕ:20–1–2004 ರ ಕಾರಣ ಕೇಳುವ ನೋಟೀಸ್ ಮತ್ತು ದಿನಾಂಕ:23.2.2004ರ ಉಪವಿಭಾಗಾಧಿಕಾರಿಗಳ ಎಚ್ಚರಿಕೆ ಪತ್ರವನ್ನು ಆಪಾದಿತರು ಹಾಜರುಪಡಿಸಿರುತ್ತಾರೆ. ಇವುಗಳಲ್ಲಿ ಶ್ರೀ ಸಿದ್ದಯ್ಯ, ಪ್ರ.ದ.ಸ. ಮತ್ತು ಶ್ರೀ ಬಿ.ಎನ್. ಪ್ರಕಾಶ್ ದ್ವಿ.ದ.ಸ. ಇವರುಗಳಿಗೆ ಈ ಬಗ್ಗೆ ಎಚ್ಚರಿಕೆ ನೀಡಲಾಗಿದೆ. ಆದ್ದರಿಂದ ಆಪಾದಿತ ಅಧಿಕಾರಿಯ ಈ ವಾದವನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲವೆಂದು ತಿಳಿಸಿದ್ದಾರೆ.

ಆಪಾದಿತ ಅಧಿಕಾರಿಯು ತಮ್ಮ ಲಿಖಿತ ವಾದದಲ್ಲಿ ಒಂದು ದಿನ ಅಂದರೆ ದಿನಾಂಕ:10–5–2004 ರಂದು ರಜೆಯನ್ನು ಸಹಾಯಕ ಆಯುಕ್ತರು ಮತ್ತು ಚುನಾವಣಾಧಿಕಾರಿಗಳಿಗೆ ಪತ್ರಗಳನ್ನು ಸಲ್ಲಿಸಿ, ಮೌಖಿಕ ಆದೇಶದ ಮೇರೆಗೆ ಅನುಮತಿ ಪಡೆದು, ತಮ್ಮ ಆರೋಗ್ಯದ ಬಗ್ಗೆ ಹಾಗೂ ತಮ್ಮ ತಂಗಿಯ ಮಗಳ ಮದುವೆಗೆ ಹೋಗಿರುವುದಾಗಿ ತಿಳಿಸಿರುತ್ತಾರೆ. ರಜೆ ಅರ್ಜಿಯನ್ನು ಸಲ್ಲಿಸಿರುವುದಕ್ಕೆ ಹಾಗೂ ರಜೆ ಅರ್ಜಿಗಳನ್ನು ಸ್ವೀಕರಿಸಿರುವುದಕ್ಕೆ ಯಾವ ಪುರಾವೆ ಇರುವುದಿಲ್ಲ. ಮೌಖಿಕವಾಗಿ ಅನುಮತಿ ಪಡೆದಿರುವುದನ್ನು ಸೂಚಿಸಲು ಯಾವ ದಾಖಲೆಯನ್ನು ಆಪಾದಿತ ಅಧಿಕಾರಿ ಹಾಜರುಪಡಿಸಿರುವುದಿಲ್ಲ.ಅಂದರೆ ಆಪಾದಿತ ಅಧಿಕಾರಿಯು ದಿನಾಂಕ:10–5–2004 ರಂದು ಸಾರ್ವತ್ರಿಕ ಚುನಾವಣಾ ಕಾರ್ಯಗಳಿಗೆ ಅನಧಿಕೃತವಾಗಿ ಗೈರು ಹಾಜರಾಗಿರುವುದು ಕಂಡುಬರುತ್ತದೆ. ಅಲ್ಲದೆ ದಿನಾಂಕ:8.5.2004, 9–5–2004 ಮತ್ತು 10–5–2004ರಂದು ಅನಧಿಕೃತವಾಗಿ ಕೇಂದ್ರಸ್ಥಾನ ಬಿಟ್ಟಿರುವುದು ವ್ಯಕ್ತವಾಗುತ್ತದೆಂದು ತಿಳಿಸಿದ್ದಾರೆ.

ದಿನಾಂಕ:12.5.2004 ರ ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳ ಅಧಿಕೃತ ಜ್ಞಾಪನದ ಪ್ರಕಾರ ಶ್ರೀಮತಿ ಶಾಂತಿ ಎನ್. ನಾಯಕ್ ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸಾಗರ ತಾಲ್ಲೂಕು ತಹಶೀಲ್ದಾರರ ಹುದ್ದೆಯ ಅಧಿಕ ಪ್ರಭಾರದಲ್ಲಿರಿಸಲಾಗಿದೆ. ಶಿಸ್ತು ಪ್ರಾಧಿಕಾರದ ಪರ 2ನೇ ಸಾಕ್ಷಿಯ ಶ್ರೀಮತಿ ಶಾಂತಿ ಎನ್. ನಾಯಕ್ ರವರು ಕರ್ತವ್ಯಕ್ಕೆ ಹಾಜರಾದ ಮೇಲೆ ಅವರಿಗೆ ಮತ ಎಣಿಕೆ ಪೂರ್ವ ಸಿದ್ಧತೆ ಬಗ್ಗೆ ತಿಳಿಸಿದುದಾಗಿಯೂ, ಮತ ಎಣಿಕೆಯ ದಿನ ಅವರು ಸಹಾಯಕ ಚುನಾವಣಾಧಿಕಾರಿಯಾಗಿ ಕೆಲಸ ನಿರ್ವಹಿಸಿರುತ್ತಾರೆಂದು ತಿಳಿಸಿರುತ್ತಾರೆ. ಹೀಗೆ ಆಪಾದಿತ ಅಧಿಕಾರಿಯ ಅನಧಿಕೃತ ಗೈರು ಹಾಜರಿಯಿಂದ ಚುನಾವಣಾ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಸಹಯಕವಾಗದೇ ಅಡಚಣೆ ಆಗಿರುತ್ತದೆ. ಇದು ಆಪಾದಿತ ಅಧಿಕಾರಿಯ ಕರ್ತವ್ಯಲೋಪ ಎನಿಸುತ್ತದೆಂದು ತಿಳಿಸಿದ್ದಾರೆ.

ವಿಚಾರಣೆ ಸಮಯದಲ್ಲಿ ವಿಚಾರಣಾಧಿಕಾರಿಗಳು ತಮ್ಮ ವರದಿಯಲ್ಲಿ ವಿಶ್ಲೇಷಿಸುವಂತೆ ಆಪಾದಿತ ಅಧಿಕಾರಿಯವರು ಯಾವುದೇ ಹೊಸ ಅಂಶಗಳಿಗೆ ಪುರಾವೆಗಳನ್ನು ನೀಡಿರುವುದಿಲ್ಲ ಕೆಲವು ವೃತ್ತ ಪತ್ರದ ಪ್ರತಿಗಳನ್ನು ಹಾಗೂ ಅಭಿನಂದನಾ ಪತ್ರಗಳನ್ನು ಅನುಬಂಧಿಸಿರುತ್ತಾರೆ. ಆದುದರಿಂದ ಇವರ ಸಮಜಾಯಿಷಿಯನ್ನು ಒಪ್ಪಲು ಸಾಧ್ಯವಾಗದು.

ಈ ಪ್ರಕರಣದಲ್ಲಿನ ವಿಚಾರಣಾ ವರದಿ ಹಾಗೂ ಆರೋಪಿತ ಅಧಿಕಾರಿಯವರು ಸಲ್ಲಿಸಿರುವ ಪ್ರತಿರಕ್ಷಣಾ ಹೇಳಿಕೆ ಹಾಗೂ ದಾಖಲೆಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಲಾಗಿ ಆಪಾದಿತರ ಸಮಜಾಯಿಷಿಯಲ್ಲಿ ಯಾವುದೇ ಸತ್ಯಾಂಶ

ಕಂಡು ಬರದೇ ಇರುವುದರಿಂದ ಶ್ರೀ ಹೆಚ್.ಪಿ. ನಾಗರಾಜ್, ತಹಶೀಲಹ್ದಾರ್, ಇವರಿಗೆ ಸರ್ಕಾರವು ಈ ಕೆಳಕಂಡ ದಂಡನೆ ವಿಧಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂ:ಆರ್ ಡಿ 57 ಎಡಿಇ 2004, ಬೆಂಗಳೂರು, ದಿನಾಂಕ:20ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ಪರಿಶೀಲಿಸಿರುವ ಹಿನ್ನಲೆಯಲ್ಲಿ ಶ್ರೀ ಹೆಚ್.ಪಿ. ನಾಗರಾಜ್, ಹಿಂದಿನ ತಹಶೀಲ್ದಾರ್, ಆಲೂರು ಪ್ರಸ್ತುತ ವಿಶೇಷ ತಹಶೀಲ್ದಾರ್, ಕೆ.ಎಸ್.ಎಫ್.ಸಿ., ದಾವಣಗೆರೆ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ನಿಯಮಾವಳಿಗಳ 1957ರ ನಿಯಮ 8(iii) ರನ್ವಯ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಸಹಿತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1341

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಎನ್. ಪುಟ್ಟಸ್ವಾಮಿ, ಹಿಂದಿನ ತಹಶೀಲ್ದಾರ್, ಚಾಮರಾಜನಗರ ಪ್ರಸ್ತುತ ನಿವೃತ್ತರು ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಮಾನ್ಯ ಉಪಲೋಕಾಯುಕ್ತರಿಗೆ ವಹಿಸಿಕೊಡುವ ಬಗ್ಗೆ.

**ಓದಲಾಗಿದೆ:** ಉಪ ನಿಬಂಧಕರು, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರ ಅ.ಸ.ಪತ್ರ ಸಂ:ಕಂಪ್ಲೇಂಟ್/ಉಪಲೋಕ್/ಎಂವೈಎಸ್.785/ 2007/ಡಿಆರ್ಇ–4, ದಿನಾಂಕ:8.8.2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದೊಂದಿಗೆ ಉಪ ನಿಬಂಧಕರು, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರು ಚಾಮರಾಜನಗರ ತಾಲ್ಲೂಕಿನ ಅಂಧಿನ ತಹಶೀಲ್ದಾರರಾದ ಶ್ರೀ ಎನ್. ಪುಟ್ಟಸ್ವಾಮಿ, ಇವರ ವಿರುದ್ಧ ಶ್ರೀ ಸಿ.ವಿ. ನಂಜಪ್ಪ ಬಿನ್ ಲೇಟ್ ಹೆಚ್.ಎನ್.ವಿ. ಆಚಾರ್, ರಾಜರಾಜೇಶ್ವರಿ ನಿಲಯ, ಅಗ್ರಹಾರ ರಸ್ತೆ, ಚಾಮರಾಜನಗರ ಇವರು ಮಾನ್ಯ ಲೋಕಾಯುಕ್ತರಿಗೆ ಸಲ್ಲಿಸಿರುವ ದೂರಿನ ಬಗ್ಗೆ ಪ್ರಾಥಮಿಕ ವಿಚಾರಣೆ ನಡೆಸಿ, ಮಾನ್ಯ ಉಪಲೋಕಾಯುಕ್ತರು ನೀಡಿರುವ ವರದಿಯನ್ನು ಕಳುಹಿಸಿ ವರದಿಯ ಬಗ್ಗೆ ಕ್ರಮ ಕೈಗೊಳ್ಳುವಂತೆ ತಿಳಿಸಿರುತ್ತಾರೆ.

ಸದರಿ ವರದಿಯನ್ನು ಪರಿಶೀಲಿಸಲಾಗಿದೆ. ಶ್ರೀ ಸಿ.ವಿ. ನಂಜಪ್ಪ ಬಿನ್ ಲೇಟ್ ಹೆಚ್.ಎನ್.ವಿ. ಆಚಾರ್, ರಾಜರಾಜೇಶ್ವರಿ ನಿಲಯ, ಅಗ್ರಹಾರ ರಸ್ತೆ, ಚಾಮರಾಜನಗರ, ಇವರು ಮಾನ್ಯ ಲೋಕಾಯುಕ್ತರಿಗೆ ಶ್ರೀ ಎನ್. ಪುಟ್ಟಸ್ವಾಮಿ, ಹಿಂದಿನ ತಹಶೀಲ್ದಾರ್, ಚಾಮರಾಜನಗರ ತಾಲ್ಲೂಕು ಇವರ ವಿರುದ್ಧ ದೂರು ನೀಡಿರುತ್ತಾರೆ. ಕಾರಣ ಅರ್ಜಿದಾರರಾದ ಶ್ರೀ ಸಿ.ವಿ. ನಂಜಪ್ಪ, ಇವರು ಚಾಮರಾಜನಗರ ತಾಲ್ಲೂಕು, ಕಸಬಾ ಹೋಬಳಿ, ಶಿವಪುರ ಗ್ರಾಮದಲ್ಲಿರುವ ತಮಗೆ ಸೇರಿದ ಸರ್ವೆ ನಂ: 247 ರಲ್ಲಿ ಮೈಸೂರು ಮಿನರಲ್ಸ್ ಸಂಸ್ಥೆಯವರು ಅಕ್ರಮವಾಗಿ ಗಣಿಗಾರಿಕೆಗೆ ಸಂಬಂಧಿಸಿದ ಸ್ಫೋಟಕ ಸಾಮಾಗ್ರಿಗಳನ್ನು ಸಂಗ್ರಹಿಸಿದ್ದು ಇವುಗಳನ್ನು ತೆರವುಗೊಳಿಸಲು ತಹಶೀಲ್ದಾರರನ್ನು ಕೋರಲಾಗಿ, ಅವರು ಈ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳದೆ ಈ ಪ್ರಕರಣವು ನ್ಯಾಯಾಲಯದಲ್ಲಿ ವಿಚಾರಣೆ ಹಂತದಲ್ಲಿ ಇರುವುದರಿಂದ ಹಸ್ತಕ್ಷೇಪ ಮಾಡುವುದು ಸಮಂಜಸವಲ್ಲವೆಂದು ತಪ್ಪು ಹಿಂಬರಹ ನೀಡಿರುತ್ತಾರೆ.

ಈ ಹಿನ್ನಲೆಯಲ್ಲಿ ಅರ್ಜಿದಾರರಾದ ಶ್ರೀ ಸಿ.ವಿ. ನಂಜಪ್ಪ, ಇವರು ಚಾಮರಾಜನಗರ ತಾಲ್ಲೂಕಿನ ತಹಶೀಲ್ದಾರರಾದ ಶ್ರಿ ಎನ್. ಪುಟ್ಟಸ್ವಾಮಿ,. ಇವರ ವಿರುದ್ಧ ಮಾನ್ಯ ಲೋಕಾಯುಕ್ತರಿಗೆ ದೂರು ಸಲ್ಲಿಸಿರುತ್ತಾರೆ ಹಾಗೂ ಈ ರೀತಿ ಕರ್ತವ್ಯಚ್ಯುತಿ ಎಸಗಿರುವ ಸದರಿ ಅಧಿಕಾರಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಮಾನ್ಯ ಉಪಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ ಕಾಯಿದೆ ಅಧಿನಿಯಮ 12(3)ರನ್ವಯ ಶಿಫಾರಸ್ಸು ಮಾಡಿರುತ್ತಾರೆ ಹಾಗೂ ಅಂತಹ ಕ್ರಮಗಳನ್ನು ಕೈಗೊಂಡ ಬಗ್ಗೆ ಸದರಿ ಕಾಯಿದೆಯ 12(4)ರನ್ವಯ 3 ತಿಂಗಳೊಳಗೆ ಮಾನ್ಯ ಲೋಕಾಯುಕ್ತರಿಗೆ ಮಾಹಿತಿ ನೀಡುವಂತೆ ಕೋರಿರುತ್ತಾರೆ.

ತನಿಖಾ ವರದಿಯಲ್ಲಿನ ಶೀಫಾರಸ್ಸನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದಲ್ಲಿ ಆರೋಪಿತರೆಂದು ಹೇಳಲಾಗಿರುವ ಶ್ರೀ ಎನ್. ಪುಟ್ಟಸ್ವಾಮಿ, ಹಿಂದಿನ ತಹಶೀಲ್ದಾರ್, ಚಾಮರಾಜನಗರ, ಪ್ರಸ್ತುತ ನಿವೃತ್ತರು ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1957ರ ನಿಯಮ 214ನ್ನು ಓದಿಕೊಂಡು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 14(ಎ)ರಡಿಯಲ್ಲಿ ಮಾನ್ಯ ಉಪಲೋಕಾಯುಕ್ತರು, ಬೆಂಗಳೂರು ಇವರಿಗೆ ವಹಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ;ಕಂಇ 41 ಎಡಿಇ 2008, ಬೆಂಗಳೂರು, ದಿನಾಂಕ:18ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದ ಶ್ರೀ ಎನ್. ಪುಟ್ಟಸ್ವಾಮಿ, ಹಿಂದಿನ ತಹಶೀಲ್ದಾರ್, ಚಾಮರಾಜನಗರ (ಪ್ರಸ್ತುತ ನಿವೃತ್ತರು) ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರಗಳಂತೆ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿಗಳ ನಿಯಮ 14ಎ ರನ್ವಯ ಕೂಲಂಕಷ ವಿಚಾರಣೆ ನಡೆಸುವ ಸಲುವಾಗಿ ಮಾನ್ಯ ಉಪಲೋಕಾಯುಕ್ತರು, ಬೆಂಗಳೂರು ಇವರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಎಂ. ಲಕ್ಷಣ್‌ಸಿಂಗ್, ಹಿಂದಿನ ತಹಶೀಲ್ದಾರ್, ಬಳ್ಳಾರಿ ಪ್ರಸ್ತುತ ತಹಶೀಲ್ದಾರ್, ಕಾರ್ಕಳ ಇವರು ಬೆಳಗಲ್ಲು ಗ್ರಾಮದ ಜಮೀನನ್ನು ಭೂ ಸುಧಾರಣೆ ಕಾಯ್ದೆ ಉಲ್ಲಂಘಿಸಿ, ಗಣಿ ಪರವಾನಗಿ ನೀಡಿರುವ ಆಪಾದನೆ ವಿರುದ್ದ ಇಲಾಖಾ ವಿಚಾರಣೆ ಜರುಗಿಸಲು ವಿಚಾರಣಾಧಿಕಾರಿಗಳ ಬದಲಾವಣೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 74 ಎಡಿಇ 2006,ದಿ:13.6.2007.

2. ಸರ್ಕಾರದ ತಿದ್ದುಪಡಿ ಸಂಖ್ಯೆ:ಆರ್‌ಡಿ 74 ಎಡಿಇ 2006, ದಿನಾಂಕ: 10–7–2007.

3. ಶ್ರೀ ಎನ್.ಎಸ್. ಸಂಗೊಳ್ಳಿ ಅಧ್ಯಕ್ಷರು, ಕರ್ನಾಟಕ ರಾಜಭಾಷ (ವಿಧಾಯೀ) ಆಯೋಗ, ಕಾವೇರಿಭವನ, ಬೆಂಗಳೂರು ಮತ್ತು ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರ ಪತ್ರದ ದಿನಾಂಕ:18.7.2007.

**ಪ್ರಸ್ತಾವನೆ:**

ಶ್ರೀ ಎಂ ಲಕ್ಷಣ್‌ಸಿಂಗ್, ಹಿಂದಿನ ತಹಶೀಲ್ದಾರ್, ಬಳ್ಳಾರಿ ಇವರು ಬೆಳಕಲ್ಲು ಗ್ರಾಮಕ್ಕೆ ಸೇರಿದ ಜಮೀನಿನ ಸರ್ವೆ ಸಂ:118 119 ಮತ್ತು 120 ವಿಸ್ತೀರ್ಣ 17–45 ಎಕರೆ ಜಮೀನುಗಳಿಗೆ ಶ್ರೀ ಆರ್. ಕಮಲ್‌ಕುಮಾರ್ ಇವರು ಗಣಿಗಾರಿಕೆ ಮಾಡಲು ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರಿಗೆ ಅರ್ಜಿ ಸಲ್ಲಿಸಿದ್ದು, ಕಂದಾಯ ಇಲಾಖೆಯ ಅಭಿಪ್ರಾಯ ಕೋರಿದಾಗ, ಶ್ರೀ ಎಲ್. ಲಕ್ಷಣ್‌ಸಿಂಗ್, ತಹಶೀಲ್ದಾರ್, ಬಳ್ಳಾರಿ ಇವರು ಕಂದಾಯ ದಾಖಲೆ ಆರ್‌ಟಿಸಿ ಪ್ರಕಾರ ಮೇಲ್ಕಂಡ ಜಮೀನುಗಳೆಲ್ಲಾ ವ್ಯವಸಾಯ ಜಮೀನುಗಳಾಗಿರುತ್ತದೆಂದು ಭೂ ಮಾಲೀಕರು ಬೇರೆ ಬೇರೆ ವ್ಯಕ್ತಿಗಳಿದ್ದು, ಶ್ರೀ ಆರ್. ಕಮಲ್‌ಕುಮಾರ್ ಇವರಿಗೆ ಲೀಸ್ ಡೀಡ್ ಮೂಲಕ ಜಮೀನುಗಳನ್ನು ಹೊಂದಿರುವುದಾಗಿ ತಿಳಿಸಿ, ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961ರ ಕಲಂ 58ರನ್ವಯ ವ್ಯವಸಾಯ ಜಮೀನುಗಳನ್ನು ಗುತ್ತಿಗೆ ನೀಡುವುದು ನಿರ್ಭಂದಿಸಿದೆ. ಹಾಲಿ ಲೀಸ್ ಡೀಡ್‌ನಿಂದ ಭೂ ಸುಧಾರಣಾ ಕಾಯ್ದೆ ಉಲ್ಲಂಘನೆಯಾಗಿರುತ್ತದೆ. ಸದರಿಯವರು ಗಣಿ ಪರನವಾನಗಿ ಕೋರಿ ಸಲ್ಲಿಸಿದ ಅರ್ಜಿಗೆ ನಿರಾಕ್ಷೇಪಣೆ ನೀಡಲು ಜಿಲ್ಲಾಧಿಕಾರಿಗಳು, ಬಳ್ಳಾರಿ ಇವರಿಗೆ ಶಿಫಾರಸ್ಸು ಮಾಡಿ ಕರ್ತವ್ಯಲೋಪ ಎಸಗಿರುವ ಆಪಾದನೆಗೆ ಸಂಬಂಧಿಸಿದಂತೆ, ಸರ್ಕಾರವು ಮೇಲೆ (1) ಮತ್ತು (2)ರಲ್ಲಿ ಓದಲಾದ ಆದೇಶದಲ್ಲಿ ವಿಚಾರಣಾಧಿಕಾರಿಗಳನ್ನಾಗಿ ಶ್ರೀ ಎನ್.ಎಸ್. ಸಂಗೊಳ್ಳಿ ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ನಂ 415/2 'ಎಫ್' ಬ್ಲಾಕ್, ಸಹಕಾರ ನಗರ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಕ್ರೇಂದ್ರಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬಳ್ಳಾರಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಎನ್.ಎಸ್. ಸಂಗೊಳ್ಳಿ ಇವರು ವಿಚಾರಣಾಧಿಕಾರಿಯಾಗಿ ಕಾರ್ಯ ನಿರ್ವಹಿಲು ಅವರ ವೈಯಕ್ತಿಕ ಕಾರಣಗಳಿಂದ ಸಾಧ್ಯವಿಲ್ಲವೆಂದು ತಿಳಿಸಿರುತ್ತಾರೆ. ಆದ್ದರಿಂದ ಸರ್ಕಾರದ ಆದೇಶ ದಿನಾಂಕ:13.6.2007ರಲ್ಲಿ ನೇಮಿಸಲಾಗಿದ್ದ ಶ್ರೀ ಎನ್.ಎಸ್. ಸಂಗೊಳ್ಳಿ ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು,. ನಂ:415/2, 'ಎಫ್' ಬ್ಲಾಕ್ ಸಹಕಾರ ನಗರ, ಬೆಂಗಳೂರು ಇವರ ಬದಲಿಗೆ ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ನಂ:239/1 'ನಾಗಶ್ರೀ" 4ನೇ ಮುಖ್ಯರಸ್ತೆ, ಚಾಮರಾಜಪೇಟೆ, ಬೆಂಗಳೂರು –560 018 ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 74 ಎಡಿಇ 2006, ಬೆಂಗಳೂರು; ದಿನಾಂಕ: 3ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಸರ್ಕಾರದ ಆದೇಶ ಸಂ:ಆರ್‌ಡಿ 74 ಎಡಿಇ 2006, ದಿನಾಂಕ: 13–6–2007ರಲ್ಲಿ ಶ್ರೀ ಎಂ. ಲಕ್ಷಣ್‌ಸಿಂಗ್, ತಹಶೀಲ್ದಾರ್, ಬಳ್ಳಾರಿ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು, ವಿಚಾರಣಾಧಿಕಾರಿಯನ್ನಾಗಿ ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ನಂ: 415//2 'ಎಫ್'

ಬ್ಲಾಕ್ ಸಹಕಾರ ನಗರ, ಬೆಂಗಳೂರು ಇವರ ಬದಲಿಗೆ ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ನಂ:239/1, 4ನೇ ಮುಖ್ಯರಸ್ತೆ, ಚಾಮರಾಜಪೇಟೆ, ಬೆಂಗಳೂರು–560 018 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಉಳಿದಂತೆ ಸರ್ಕಾರದ ಆದೇಶ ಸಂ:ಆರ್‌ಡಿ 74 ಎಡಿಇ 2006, ದಿನಾಂಕ:13.6.2007ರಲ್ಲಿ ನೇಮಿಸಲಾಗಿದ್ದ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬಳ್ಳಾರಿ ಇವರನ್ನು ಪ್ರಕರಣದ ಮಂಡಣಾಧಿಕಾರಿಯಾಗಿ ಮುಂದುವರೆಸಿದೆ ಹಾಗೂ ಉಳಿದ ನಿಬಂಧನೆಗಳು ಸದರಿ ಆದೇಶದಲ್ಲಿರುವಂತೆ ಮುಂದುವರಿಯುತ್ತವೆ.

ವಿಚಾರಣಾಧಿಕಾರಿಗಳು, ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11(ಎ)ರಲ್ಲಿನ ವಿಧಿವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ವೈ.ಎಸ್. ಹುಚ್ಚಣ್ಣ, ನಿವೃತ್ತ ತಹಶೀಲ್ದಾರ್, ಇವರಿಗೆ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ ಇವರ ಪ್ರಸ್ತಾವನೆ ಸಂ:ಕಂದಾಯ:ಸಿಬ್ಬಂದಿ–2:2004–05, ದಿನಾಂಕ:18.2.2005.

2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ನಿಯಮದ ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂ:ಕರೇಮಾಮ/ಆಡಳಿತ/ವಾ/2007–08/814, ದಿನಾಂಕ:16.8.2007.

3. ಮಹಾಲೇಖಪಾಲರು (ಎ&ಇ),ಇವರ ಪತ್ರ ಸಂ: GE1/R-3/Vol-529/609, Dt:24.7.2008.

**ಪ್ರಸ್ತಾವನೆ:**

ಮೇಲೆ (1) ಮತ್ತು (2) ರಲ್ಲಿ ಓದಲಾದ ಜಿಲ್ಲಾಧಿಕಾರಿಗಳು, ಕೊಪ್ಪಳ ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ, ಬೆಂಗಳೂರು ಇವರ ಪ್ರಸ್ತಾವನೆಗಳಲ್ಲಿ ಶ್ರೀ ವೈ.ಎಸ್. ಹುಚ್ಚಣ್ಣ, ನಿವೃತ್ತ ತಹಶೀಲ್ದಾರ್, ಇವರು ವೇತನ ಶ್ರೇಣಿ ರೂ. 6,000–11,200 (ಹಿಂದಿನ ವೇತನ ಶ್ರೇಣಿ) ರಲ್ಲಿ ದಿನಾಂಕ:1.12.2001 ರಿಂದ ಗರಿಷ್ಠ ಹಂತ ತಲುಪಿರುವುದರಿಂದ ದಿನಾಂಕ:1.12.2002ರಿಂದ ಅನ್ವಯವಾಗುವಂತೆ 5 ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವಂತೆ ಪ್ರಸ್ತಾಪಿಸಿರುತ್ತಾರೆ. ಮೇಲೆ (3)ರಲ್ಲಿ ಓದಲಾದ ಮಹಾಲೇಖಪಾಲರು, ಕರ್ನಾಟಕ ಬೆಂಗಳೂರು ಇವರ ದಿನಾಂಕ:24.7.2008ರ ವರದಿಯಲ್ಲಿ ದಿನಾಂಕ:1.12.2002 ರಿಂದ ಸ್ಥಗಿತ ವೇತನ ಬಡ್ತಿಗೆ ಅರ್ಹರಿರುವುದಾಗಿ ತಿಳಿಸಿರುತ್ತಾರೆ.

ಸರ್ಕಾರವು ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ ಮತ್ತು ಮಹಾಲೇಖಪಾಲರು, ಕರ್ನಾಟಕ ಬೆಂಗಳೂರು ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ರೂ. 6,000–11,200ರ ವೇತನ ಶ್ರೇಣಿಯಲ್ಲಿ ದಿನಾಂಕ:1–12–2002 ರಿಂದ ಅನ್ವಯವಾಗುವಂತೆ ಒಟ್ಟು ನಾಲ್ಕು ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಲು ನಿರ್ಧರಿಸಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ:ಆರ್‌ಡಿ 230 ಎಎಸ್‌ಡಿ 2007, ಬೆಂಗಳೂರು, ದಿನಾಂಕ:17ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಶ್ರೀ ವೈ.ಎಸ್. ಹುಚ್ಚಣ್ಣ, ನಿವೃತ್ತ ತಹಶೀಲ್ದಾರ್ ಇವರಿಗೆ ವೇತನ ಶ್ರೇಣಿ ರೂ. 6,000–11,200ರಲ್ಲಿ ಈ ಕೆಳಕಂಡಂತೆ ಮೂರು ಸ್ಥಗಿತ ವೇತನ ಬಡ್ತಿಗಳನ್ನು ಹಾಗೂ ವೇತನ ಶ್ರೇಣಿ ರೂ. 11,400–21,600 ರಲ್ಲಿ ನಾಲ್ಕನೇ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಿ ಆದೇಶಿಸಿದೆ.

ವೇತನ ಶ್ರೇಣಿ–ರೂ, 6, 000–11,200.

1) ದಿನಾಂಕ:1.12.2002 ರಿಂದ ಮೊದಲನೇ ಸ್ಥಗಿತ ವೇತನ ಬಡ್ತಿ

2) ದಿನಾಂಕ:1.12.2003 ರಿಂದ ಎರಡನೇ ಸ್ಥಗಿತ ವೇತನ ಬಡ್ತಿ

3) ದಿನಾಂಕ:1.12.2004 ರಿಂದ ಮೂರನೇ ಸ್ಥಗಿತ ವೇತನ ಬಡ್ತಿ

ವೇತನ ಶ್ರೇಣಿ–ರೂ. 11,400–21,600

4) ದಿನಾಂಕ: 1.12.2005 ರಿಂದ ನಾಲ್ಕನೇ ಸ್ಥಗಿತ ವೇತನ ಬಡ್ತಿ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1342

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ:** ಶ್ರೀ ಬಿ.ಸಿ. ಮುಧೋಳ್ ನಿವೃತ್ತ ಮುಖ್ಯ ಇಂಜಿನಿಯರ್ ಅವರ ವಿರುದ್ಧ ಇಲಾಖಾ ವಿಚಾರಣೆ– ಮಂಡನಾಧಿಕಾರಿ ನೇಮಕ–ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 51 ಎಸ್ ಇಎನ್ 05 ದಿನಾಂಕ:8.6.2007.

2. ಜಿಲ್ಲಾಧಿಕಾರಿ, ಉಡುಪಿ ಜಿಲ್ಲೆ ಇವರ ಪತ್ರ ಸಂಖ್ಯೆ:ಉಜಿಕ/ಪಿಎ–1/ಜಿಆ/ಇತರೆ/2008 ದಿನಾಂಕ:14.5.2008.

**ಪ್ರಸ್ತಾವನೆ:**

ಶ್ರೀ ಬಿ.ಸಿ. ಮುಧೋಳ್, ನಿವೃತ್ತ ಮುಖ್ಯ ಇಂಜಿನಿಯರ್‌ರವರು ಬಾಗಲಕೋಟೆ ನಗರ ಅಭಿವೃದ್ಧಿ ಪ್ರಾಧಿಕಾರದ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಪ್ರಾಧಿಕಾರದ ವ್ಯಾಪ್ತಿಯಲ್ಲಿ 300 ಕಾಮಗಾರಿಗಳನ್ನು ಅವುಗಳ ಅಂದಾಜು ಪಟ್ಟಿಯನ್ನು ಸಿದ್ದಪಡಿಸದೆ ತಮಗೆ ಬೇಕಾದ ಕಂಟ್ರಾಕ್ಟರುಗಳಿಗೆ ನೀಡಿ ಅವುಗಳು ಪೂರ್ಣಗೊಳ್ಳದೆ ಅರ್ಧಕ್ಕೆ ನಿಂತಿದ್ದರೂ ಸಹ ಅವುಗಳ ಗುಣಮಟ್ಟ ಅಳೆಯದೇ ಪೂರ್ಣ ಹಣ ಪಾವತಿ ಮಾಡಿದ್ದು, ಆಲಮ್ ಕ್ಲೋರಿನ್ ಮತ್ತು ಪ್ರಾಧಿಕಾರಕ್ಕೆ ಅವಶ್ಯಕತೆಗಿಂತ ಹೆಚ್ಚಾಗಿ ವಾಟರ್ ಮೀಟರ್ ಖರೀದಿಯಲ್ಲಿ ಅವ್ಯವಹಾರ ಎಸಗಿ ಪಾರದರ್ಶಕತೆ ಕಾಯಿದೆಗಳನ್ನು ಪಾಲಿಸದೆ ಸರ್ಕಾರದ ಹಣವನ್ನು ದುರುಪಯೋಗಪಡಿಸಿರುವ ಆರೋಪಗಳಿಗಾಗಿ ಶ್ರೀ ಬಿ.ಸಿ. ಮುಧೋಳ್ ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11,11–ಎ ರನ್ವಯ ಇಲಾಖಾ ವಿಚಾರಣೆ ಜರುಗಿಸಲು ಮೇಲೆ (1) ರಲ್ಲಿ ಓದಲಾದ ದಿನಾಂಕ:8.6.07ರ ಸರ್ಕಾರದ ಆದೇಶದಲ್ಲಿ ಶ್ರೀ ಬಿ. ರಂಗಸ್ವಾಮಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳಾಗಿ ನೇಮಿಸಲಾಯಿತು ಹಾಗೂ ಶ್ರೀಮತಿ ಹೇಮಲತಾ, ಮುಖ್ಯ ಕಾರ್ಯ ನಿರ್ವಹಣಾಧಿಕಾರಿ, ಜಿಲ್ಲಾಪಂಚಾಯತ್, ಉಡುಪಿ ಜಿಲ್ಲೆ ರವರನ್ನು ಮಂಡನಾಧಿಕಾರಿಯಾಗಿ ಮುಂದುವರಿಸಲಾಯಿತು ಮಂಡನಾಧಿಕಾರಿಯವರು ಮೇಲೆ (2)ರಲ್ಲಿ ಓದಲಾದ ದಿನಾಂಕ: 14.5.08ರ ಪತ್ರದಲ್ಲಿ ಉಡುಪಿ ಜಿಲ್ಲೆಯಲ್ಲಿನ ಕೆಲಸದ ಒತ್ತಡದಿಂದಾಗಿ ಈ ಪ್ರಕರಣದಲ್ಲಿ ಮಂಡನಾಧಿಕಾರಿಯಾಗಿ ಕಾರ್ಯನಿರ್ವಹಿಸಲು ಸಾಧ್ಯವಾಗುವುದಿಲ್ಲವಾದ ಕಾರಣ ಈ ಪ್ರಕರಣದ ಮಂಡನಾಧಿಕಾರಿ ಜವಾಬ್ದಾರಿಯಿಂದ ಬಿಡುಗಡೆಗೊಳಿಸಿ ಬೇರೊಬ್ಬ ಅಧಿಕಾರಿಯವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸುವಂತೆ ಕೋರಿರುತ್ತಾರೆ. ಈ ಬಗ್ಗೆ ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 51 ಎಸ್ ಇಎನ್ 2005, ಬೆಂಗಳೂರು, ದಿನಾಂಕ:22ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 51 ಎಸ್‌ಇಎನ್ 2005 ದಿನಾಂಕ:8.6.2007ನ್ನು ಭಾಗಶಃ ಮಾರ್ಪಡಿಸಿ ಶ್ರೀಮತಿ ಪಿ. ಹೇಮಲತಾ, ಜಿಲ್ಲಾಧಿಕಾರಿ ಉಡುಪಿ ಜಿಲ್ಲೆ ಅವರ ಸ್ಥಾನದಲ್ಲಿ ಶ್ರೀ ಪಾಲಯ್ಯ, ನಿಬಂಧಕರು, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಆನಂದರಾವ್ ವೃತ್ತ ಬೆಂಗಳೂರು ಇವರನ್ನು ಮಂಡನಾಧಿಕಾರಿಯಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11(5)(ಸಿ) ಅನ್ವಯ ನೇಮಿಸುತ್ತದೆ. ವಿಚಾರಣಾಧಿಕಾರಿಯವರಿಗೆ ಸ್ಥಳಾವಕಾಶ ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಮಂಡನಾಧಿಕಾರಿಗಳು ಕ್ರಮಕೈಗೊಳ್ಳುವುದು, ಹಾಗೂ ವಿಚಾರಣೆಯನ್ನು ಮೂರು ತಿಂಗಳೊಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಜಿ.ಎಸ್. ಜಿದ್ದಿಮನಿ, ಕೆಎಎಸ್ (ಕಿರಿಯ ಶ್ರೇಣಿ) ಹಿಂದಿನ ತಹಶೀಲ್ದಾರ್, ಚಾಮರಾಜನಗರ ತಾಲ್ಲೂಕು, ಚಾಮರಾಜನಗರ ಇವರ ವಿರುದ್ಧ ಇಲಾಖಾ ವಿಚಾರಣೆ–ಅಂತಿಮ ಆದೇಶ.

**ಓದಲಾಗಿದೆ:** 1. ದಿನಾಂಕ:6.6.07ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 239 ಎಸ್‌ಇಎನ್ 06

2. ದಿನಾಂಕ:22.10.07ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 306 ಕೆಇವಿ 07

3. ಶ್ರೀ ಎನ್. ಉಮಾಪತಿ,. ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಹಾಗೂ ವಿಚಾರಣಾಧಿಕಾರಿಗಳು ಇವರ ವಿಚಾರಣಾ ವರದಿ ದಿನಾಂಕ:28.6.08.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಶ್ರೀ ಜಿ.ಎಸ್. ಜಿದ್ದಿಮನಿ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಇವರು ಈ ಹಿಂದೆ ಚಾಮರಾಜನಗರ ತಾಲ್ಲೂಕಿನ ತಹಶೀಲ್ದಾರರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಕರಿನಂಜನಾಪುರ ಗ್ರಾಮದ ಸರ್ವೆ ನಂ 91/1, 91/2, 93/4 ಮತ್ತು 94/1 ರಲ್ಲಿನ ಒಟ್ಟು 06–34 ಎಕರೆ ಜಮೀನನ್ನು ಶ್ರೀ ಎನ್. ರಾಜಶೇಖರಮೂರ್ತಿ ಬಿನ್ ಕೆ.ಸಿ. ನಾಗಣ ಎಂಬುವವರ ಹೆಸರಿಗೆ ಅನ್ಯಕ್ರಾಂತ ಮಂಜೂರು ಆದೇಶ ಮಾಡುವಾಗ, ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 63 79–A 79–B ಮತ್ತು 80 ಗಳ ಉಲ್ಲಂಘನೆಯಾಗಿದೆಯೇ ಅಥವಾ ಇಲ್ಲವೆ ಎಂಬ ಬಗ್ಗೆ ಪರಿಶೀಲಿಸದೆ, ನಗರ ಯೋಜನಾ ಪ್ರಾಧಿಕಾರದ ಅಭಿಪ್ರಾಯ ಪಡೆಯದೇ ಅನ್ಯಕ್ರಾಂತ ಮಂಜೂರು ಆದೇಶ ಮಾಡಿ ಕರ್ನಾಟಕ ನಾಗರೀಕ ಸೇವೆ (ನಡತೆ) ನಿಯಮಾವಳಿಯನ್ನು ಉಲ್ಲಂಘಿಸಿ, ಕರ್ತವ್ಯ ನಿರ್ವಹಣೆಯಲ್ಲಿ ಲೋಪವೆಸಗುವ ಮೂಲಕ ಎಸಗಿದ ದುರ್ನಡತೆ ಆರೋಪದಲ್ಲಿನ ಸತ್ಯಾಸತ್ಯೆಯನ್ನು ವಿಚಾರಣೆಯ ಮೂಲಕ ತಿಳಿಸಯುವ ಸಲುವಾಗಿ, ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಆರೋಪದ ಬಗ್ಗೆ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಶ್ರೀ ಎನ್. ಉಮಾಪತಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯ ಮುಂದೆ ಮಂಡಿಸಲು, ಉಪ ವಿಭಾಗಾಧಿಕಾರಿ, ಕೊಳ್ಳೇಗಾಲ ಉಪ ವಿಭಾಗ, ಚಾಮರಾಜನಗರ ಜಿಲ್ಲೆ ಇವರನ್ನು ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಮಂಡನಾಧಿಕಾರಿಯಾಗಿ ನೇಮಿಸಲ್ಪಟ್ಟ ಉಪ ವಿಭಾಗಾಧಿಕಾರಿ, ಕೊಳ್ಳೇಗಾಲ ಇವರು ಆರೋಪ ಪಟ್ಟಿಯ ಅನುಬಂಧ–3 ರಲ್ಲಿನ ಸಾಕ್ಷಿ ಪಟ್ಟಿಯ ಅನುಬಂಧ–3 ರಲ್ಲಿನ ಸಾಕ್ಷಿ ಪಟ್ಟಿಯಲ್ಲಿ ಸಾಕ್ಷಿದಾರರಾಗಿಯೂ ಸಹ ಇರುವುದು ಸರ್ಕಾರದ ಗಮನಕ್ಕೆ ಬಂದ ಕಾರಣ ಇವರ ಬದಲಿಗೆ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಇವರನ್ನು ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಂತೆ ವಿಚಾರಣಾಧಿಕಾರಿಯವರು ಸಲ್ಲಿಸಿದ ವಿಚಾರಣಾ ವರದಿಯಲ್ಲಿ ಶ್ರಿ ಜಿದ್ದಿಮನಿ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಇವರ ವಿರುದ್ಧದ ಆರೋಪವು ಸಾಬಿತಾಗಿರುವುದಿಲ್ಲವೆಂದು ವರದಿ ನೀಡಿರುತ್ತಾರೆ. ವಿಚಾರಣಾ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶಿಲಿಸಿದ ನಂತರ ವಿಚಾರಣಾ ವರದಿಯನ್ನು ಅಂಗೀಕರಿಸಲು ನಿರ್ಣಯಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 306 ಕೆಇವಿ 07, ಬೆಂಗಳೂರು, ದಿನಾಂಕ:2ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂಗಾಗಿ, ಸರ್ಕಾರವು ಶ್ರಿ ಜಿ.ಎಸ್. ಜಿದ್ದಿಮನಿ, ಕೆಎಎಸ್ (ಕಿರಿಯ ಶ್ರೇಣಿ), ಹಿಂದಿನ ತಹಶೀಲ್ದಾರ್, ಚಾಮರಾಜನಗರ ತಾಲ್ಲೂಕು, ಚಾಮರಾಜನಗರ ಪ್ರಸ್ತುತ ವಿಶೇಷ ಭೂ ಸ್ವಾಧೀನಾಧಿಕಾರಿ, ಕಬಿನಿ–1 ಕಾವೇರಿ ನೀರಾವರಿ ನಿಗಮ, ಚಾಮರಾಜನಗರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಇವರನ್ನು ಪ್ರಸ್ತಾವನೆಯಲ್ಲಿ ವಿವರಿಸಿದ ಆರೋಪಗಳಿಂದ ದೊಷಮುಕ್ತಗೊಳಿಸಿ ಆದೇಶಿಸಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಶ್ರೀಯುತರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿಸುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1344

**ಹೆಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–2)

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ:** ಅಡ್ಮನಿಸ್ಟ್ರೇಟಿವ್ ಜನರಲ್ ಹಾಗೂ ಅಫಿಷಿಯಲ್ ಟ್ರಸ್ಟೀ ಇವರ ಕಛೇರಿಯಲ್ಲಿ ಅಂಶಕಾಲಿಕ ಆಧಾರದ ಮೇಲೆ ಕೆಲಸ ಮಾಡುತ್ತಿರುವ ಉಚ್ಚ ನ್ಯಾಯಾಲಯದ ಸಿಬ್ಬಂದಿಗಳ ಸಂಭಾವನಾ ಭತ್ಯೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ:ಲಾ 290 ಎಲ್‌ಸಿಎಲ್ 92, ದಿನಾಂಕ:8.9.93.
2. ಸರ್ಕಾರಿ ಆದೇಶ ಸಂ.ಲಾ 56 ಎಲ್‌ಸಿಎಲ್ 2000, ದಿನಾಂಕ:7.6.2001
3. ಅಡ್ಮಿನಿಸ್ಟ್ರೇಟಿವ್ ಜನರಲ್ ಮತ್ತು ಅಫಿಷಿಯಲ್ ಟ್ರಸ್ಟೀ ಇವರ ಪತ್ರ ದಿನಾಂಕ:28.7.07.
4. ಸರ್ಕಾರಿ ಪತ್ರ ಸಂಖ್ಯೆ ಲಾ 180 ಎಲ್‌ಸಿಎಲ್ 07 ದಿನಾಂಕ:29.9.2007.
5. ರಿಜಿಷ್ಟ್ರಾರ್ ಜನರಲ್ ಕರ್ನಾಟಕ ಉಚ್ಚ ನ್ಯಾಯಾಲಯ ಇವರ ಪತ್ರ ಸಂಖ್ಯೆ: ಹೆಚ್‌ಸಿಇ:805/07 ದಿನಾಂಕ:24.3.08.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:8–9–1993ರ ಆದೇಶದ ನಂತರ, (2)ರಲ್ಲಿ ಓದಲಾಗಿರುವ ದಿನಾಂಕ:7.6.2001ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ಸೇವೆಗೆ ಸೇರಿರುವ ಶಾಖಾಧಿಕಾರಿ, ಹಿರಿಯ ಸಹಾಯಕರು ಬೆರಳಚ್ಚುಗಾರ ಮತ್ತು ಗ್ರೂಪ್–ಡಿ ಅಧಿಕಾರಿ; ನೌಕರರುಗಳು ಅವರ ಕಛೇರಿ ಅವಧಿಯ ನಂತರ ಪ್ರತಿ ಶನಿವಾರ (ರಜಾ ದಿನಗಳನ್ನು ಹೊರತುಪಡಿಸಿ) ಅಡ್ಮಿನಿಸ್ಟ್ರೇಟರ್ ಜನರಲ್ ಹಾಗೂ ಅಫಿಷಿಯಲ್ ಟ್ರಸ್ಟೀ ಇವರ ಕಛೇರಿಯಲ್ಲಿ ಅಂಶಕಾಲಿಕಾ ಆಧಾರದಲ್ಲಿ ಕೆಲಸ ನಿರ್ವಹಿಸಿದ ಸಲುವಾಗಿ ಈ ಕೆಳಕಂಡಂತೆ ಸಂಭಾವನೆಯನ್ನು ಹೆಚ್ಚಿಸಿ ಅವರುಗಳ ಮುಂದೆ ಸೂಚಿಸಿರುವಂತೆ ಮಾಸಿಕ ಸಂಭಾವನೆ ನೀಡಲು ಅನುಮತಿ ನೀಡಲಾಗಿತ್ತು.

| | | |
|---|---|---|
| 1 | ಶಾಖಾಧಿಕಾರಿ | ರೂ 300 /– |
| 2 | ಹಿರಿಯ ಸಹಾಯಕರು | ರೂ. 260/– |
| 3 | ಬೆರಳಚ್ಚುಗಾರ | ರೂ. 150/– |
| 4 | ಗ್ರೂಪ್–ಡಿ ನೌಕರ | ರೂ. 125/– |

ಮೇಲೆ (3)ರಲ್ಲಿ ಓದಲಾದ ದಿನಾಂಕ:28.7.2007ರ ಪತ್ರದಲ್ಲಿ ಅಡ್ಮಿನಿಸ್ಟ್ರೇಟಿವ್ ಜನರಲ್ ಅಫಿಷಿಯಲ್ ಟ್ರಸ್ಟೀ ಇವರು ಮೇಲಿನ ಸಂಭಾವನೆಯನ್ನು ಹೆಚ್ಚಿಸುವಂತೆ ಕೋರಿರುತ್ತಾರೆ. ಈ ಬಗ್ಗೆ ಮೇಲೆ (4)ರಲ್ಲಿ ಓದಲಾಗಿರುವ ದಿನಾಂಕ:29.9.07ರ ಪತ್ರದಲ್ಲಿ ಉಚ್ಚ ನ್ಯಾಯಾಲಯದ ಅಭಿಪ್ರಾಯವನ್ನು ಕೋರಲಾಗಿತ್ತು. ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯರವರು ಮೇಲೆ (5)ರಲ್ಲಿ ಓದಲಾದ ದಿನಾಂಕ: 24.3.08ರ ಪತ್ರದಲ್ಲಿ ಪ್ರತಿ ಶನಿವಾರ ಅರ್ಧ ದಿನದ ಕೆಲಸ ನಿರ್ವಹಿಸಿದ ದಿನಕ್ಕೆ ಸಂಭಾವನೆಯನ್ನು ಕ್ರಮವಾಗಿ ರೂ. 250, 200, 150 ಮತ್ತು 100ರಂತೆ ಅಂಶಕಾಲಿಕ ಅಧಿಕಾರಿ: ನೌಕರರಿಗೆ ಹೆಚ್ಚಿಸಬಹುದೆಂದು ಅಭಿಪ್ರಾಯ ವ್ಯಕ್ತ ಪಡಿಸಿರುತ್ತಾರೆ. ಇದುವರೆಗೂ ಮಾಸಿಕ ಭತ್ಯೆ ಹೆಚ್ಚಿಸಿರುವ ಹಿನ್ನಲೆಯಲ್ಲಿ ಈ ಕೆಳಕಂಡಂತೆ ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಲಾ 180 ಎಲ್ ಸಿಎಲ್ 2007, ಬೆಂಗಳೂರು, ದಿನಾಂಕ:17ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಅಡ್ಮಿನಿಸ್ಟ್ರೇಟಿವ್ ಜನರಲ್ ಹಾಗೂ ಅಫಿಷಿಯಲ್ ಟ್ರಸ್ಟೀ ಇವರ ಕಛೇರಿಯಲ್ಲಿ ಅಂಶಕಾಲಿಕ ಆಧಾರದ ಮೇಲೆ ಪ್ರತಿ ಶನಿವಾರ ಕಾರ್ಯನಿರ್ವಹಿಸುವ ಉಚ್ಚ ನ್ಯಾಯಾಲಯದ ಈ ಕೆಳಕಂಡ ಅಧಿಕಾರಿ:ನೌಕರರುಗಳಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಸಂಭಾವನೆಯನ್ನು ದುಪ್ಪಟು ಹೆಚ್ಚಿಸಿ ಅವರುಗಳ ಮುಂದೆ ಸೂಚಿಸಿರುವಂತೆ ನೀಡಲು ಅನುಮತಿ ನೀಡಿದೆ.

| | | |
|---|---|---|
| 1 | ಶಾಖಾಧಿಕಾರಿ | ರೂ 600 /– ಮಾಸಿಕ ಸಂಭಾವನೆ |
| 2 | ಹಿರಿಯ ಸಹಾಯಕರು | ರೂ. 520/– ಮಾಸಿಕ ಸಂಭಾವನೆ |
| 3 | ಬೆರಳಚ್ಚುಗಾರ | ರೂ. 300/– ಮಾಸಿಕ ಸಂಭಾವನೆ |
| 4 | ಜವಾನ (ಗ್ರೂಪ್–ಡಿ) | ರೂ. 250/– ಮಾಸಿಕ ಸಂಭಾವನೆ |

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2014–00–110–0–01 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 542:ವೆಚ್ಚ–7/2008 ದಿನಾಂಕ:29.8.2008ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1345

**ಶಕುಂತಲ ಹೆಚ್.ಆರ್.**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ವಿಷಯ:** ಶ್ರೀ ವೃಷಬೇಂದ್ರ, ಪ್ರಸಾದ್ ನೋಟರಿ, ಗುಂಡ್ಲಪೇಟೆ ಇವರನ್ನು ಕರ್ತವ್ಯದಿಂದ ವಿಮುಕ್ತಿಗೊಳಿಸಿ, ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆಯುವ ಬಗ್ಗೆ.

**ಓದಲಾಗಿದೆ:**

1. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಾಮರಾಜನಗರ, ಇವರ ಪತ್ರ ಸಂಖ್ಯೆ:1726:2005 ದಿನಾಂಕ:31.8.05.
2. ಸರ್ಕಾರದ ಪತ್ರ ಸಂಖ್ಯೆ:ಲಾ 124 ಎಲ್‌ಸಿಎಲ್ 2003, ದಿನಾಂಕ:12.12.05 ಮತ್ತು 28.6.2007
3. ಸರ್ಕಾರದ ಇದೇ ಕ್ರಮಾಂಕದ ಪತ್ರ ದಿನಾಂಕ:16.11.07 ಮತ್ತು 16.2.08 ಹಾಗೂ ಕಾರಣ ಕೇಳುವ ತಿಳುವಳಿಕೆ ಪತ್ರ ದಿನಾಂಕ:6.6.08.
4. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಾಮರಾಜನಗರ, ಇವರ ಪತ್ರ ಸಂಖ್ಯೆ: 1376:2008 ದಿನಾಂಕ:14.7.08.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 31.8.05 ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಾಮರಾಜನಗರ ರವರು ಶ್ರೀ ವೃಷಬೇಂದ್ರ ಪ್ರಸಾದ್, ನೋಟರಿ, ಗುಂಡ್ಲಪೇಟೆ, ಇವರು ಸ್ಥಳೀಯವಾಗಿ ಲಭ್ಯವಿಲ್ಲದೆ ಕೆಲಸ ನಿರ್ವಹಿಸದ ಕಾರಣ ಇವರ ಬದಲಿಗೆ ಬೇರೊಬ್ಬರನ್ನು ನೋಟರಿಯನ್ನಾಗಿ ನೇಮಿಸುವಂತೆ ಕೋರಿದ್ದರು. ಅದರಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ:12.12.05 ಮತ್ತು 28.6.07 ಪತ್ರಗಳಲ್ಲಿ ಶ್ರೀಯುತರು ನೋಟರಿ, ನಿಯಮಾನುಸಾರ ಕರ್ತವ್ಯ ನಿರ್ವಹಿಸದ ಕುರಿತು ಕೆಲವೊಂದು ಅಂಶಗಳ ಬಗ್ಗೆ ಪರಿಶೀಲಿಸಿ, ನೋಟರಿ ನಿಯಮಾವಳಿಗಳನ್ವಯ ಶ್ರೀಯುತರಿಂದ ಲಿಖಿತ ಹೇಳಿಕೆ ಪಡೆದು ತಿಳಿಸುವಂತೆ ಕೋರಲಾಗಿತ್ತು. ಹಾಗೂ ಸರ್ಕಾರದಿಂದಲೂ ಉಲ್ಲೇಖಿತ (3)ರ ದಿನಾಂಕ :16.11.07 ಮತ್ತು 16.2.08ರ ಪತ್ರಗಳಲ್ಲಿ ವಿವರಣೆಯನ್ನೂ ಕೋರಿ, ನಂತರ ದಿನಾಂಕ:6.6.08ರ ಕಾರಣ ಕೇಳುವ ನೋಟೀಸ್ ಜಾರಿ ಮಾಡಿದ್ಯಾಗ್ಯೂ ಅವುಗಳನ್ನು ಸ್ವೀಕರಿಸದ್ದರೂ ನೋಟರಿಯವರಿಂದ ಯಾವುದೇ ಪ್ರತಿಕ್ರಿಯೆ ಬಂದಿರುವುದಿಲ್ಲ ಮತ್ತು ನೋಟರಿಯವರು ಇದುವರೆಗೂ ಲಿಖಿತ ಮಾಹಿತಿಯನ್ನು ಸಲ್ಲಿಸಿಲ್ಲ, ಇವರು ಸಾಮಾನ್ಯವಾಗಿ ಮೈಸೂರಿನಲ್ಲಿ ವಾಸವಿದ್ದು, ಗುಂಡ್ಲಪೇಟೆಗೆ ಅಪರೂಪಕ್ಕೆ ತಿಂಗಳಲ್ಲಿ ಒಂದು ದಿನ ಬರುವುದು ವಾಡಿಕೆಯಾಗಿದೆ. ಆದ್ದರಿಂದ ನೋಟರಿ ನಿಯಮ 13 (12)ರನ್ವಯ ಮುಂದಿನ ಕ್ರಮ ಜರುಗಿಸಲು ಸೂಕ್ತವಾಗಿದೆ ಎಂದು ಸಿವಿಲ್ ನ್ಯಾಯಾಧೀಶರು (ಕಿ.ವಿ) ಮತ್ತು ಜೆ.ಎಂ.ಎಫ್.ಸಿ, ಗುಂಡ್ಲುಪೇಟೆ ರವರು ಜಿಲ್ಲಾ ಸತ್ರ ನ್ಯಾಯಾಧೀಶರಿಗೆ ಸಲ್ಲಿಸಿರುವ ವರದಿಯನ್ನು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಾಮರಾಜನಗರ ರವರು ಮೇಲೆ (4)ರಲ್ಲಿ ಓದಲಾದ ದಿನಾಂಕ:14.7.08ರ ಪತ್ರದಲ್ಲಿ ಸಲ್ಲಿಸಿದ್ದಾರೆ.

ಆದ್ದರಿಂದ ನೋಟರಿಯವರು ನೋಟರಿ ನಿಯಮಾನುಸಾರ ನೋಟರಿ ರಿಟರ್ನ್ಸ್: ರಿಜಿಸ್ಟರ್‌ಗಳನ್ನು ತಪಾಸಣೆಗೆ ಸಲ್ಲಿಸಿ ತಪಾಸಿಸಿಕೊಳ್ಳದಿರುವುದು, ಸರ್ಕಾರದ ದಿನಾಂಕ:6.6.08ರ ಕಾರಣ ಕೇಳುವ ತಿಳಿವಳಿಕೆ ಪತ್ರವನ್ನು ನೇರವಾಗಿ ಹಾಗೂ ನ್ಯಾಯಾಧೀಶರ ಕಛೇರಿ ಮೂಲಕ ಸ್ವೀಕರಿಸಿಯೂ ಸದರಿ ನೋಟೀಸಿಗೆ ಯಾವುದೇ ಪ್ರತಿಕ್ರಿಯೆ ನೀಡದಿರುವುದು, ನೋಟರಿ ಅಧಿನಿಯಮ:ನಿಯಮಗಳನ್ನು ಪಾಲಿಸದಿರುವುದರೊಂದಿಗೆ, ಸ್ಥಳಿಯರಿಗೆ ಇವರಿಂದ ನೋಟರಿ ಕರ್ತವ್ಯದಲ್ಲಿ ಸಾರ್ವಜನಿಕ ಉಪಯೋಗವಿಲ್ಲದಿರುವುದು ಹಾಗೂ ಶ್ರೀಯುತರ ನೋಟರಿ ಪ್ರಮಾಣ ಪತ್ರದ ಅವಧಿ 2006ರಲ್ಲಿ (ದಿನಾಂಕ:12.11.2006ಕ್ಕೆ) ಅಂತ್ಯಗೊಂಡಿದ್ದರೂ ಪುನಃ ಅವರು ನವೀಕರಿಸಿಕೊಂಡಿಲ್ಲದಿರುವುದು, ಇವುಗಳನ್ನು ಗಂಭೀರವಾಗಿ ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ಲಾ 214 ಎಲ್‌ಸಿಎಲ್ 2007, ಬೆಂಗಳೂರು, ದಿನಾಂಕ:22ನೇ ಸೆಪ್ಟೆಂಬರ್ 2008**

ಶ್ರೀ ವೃಷಬೇಂದ್ರ ಪ್ರಸಾದ್ ನೋಟರಿ, ಗುಂಡ್ಲುಪೇಟೆ ಕಂದಾಯ ತಾಲ್ಲೂಕು ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ನೋಟರಿಗಳ ಅಧಿನಿಯಮ (1952)ರ ಕಲಂ 10 (ಬಿ) (ಸಿ) ಹಾಗೂ ನಿಯಮಗಳು (1956)ರ ನಿಯಮ 13 (12)(ಬಿ) ರನ್ವಯ ನೋಟರಿ ಕರ್ತವ್ಯದಿಂದ ವಿಮುಕ್ತಿಗೊಳಿಸಿ ಶ್ರೀಯುತರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ಶಾಶ್ವತವಾಗಿ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1346

**ಶಕುಂತಲ ಹೆಚ್.ಆರ್.**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

(ಆಡಳಿತ–2)

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ:** ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ತಾಲ್ಲೂಕಿನ ಕಸಬಾ ಹೋಬಳಿ ಹುಲಿಗುಂದಿ ಗ್ರಾಮದ ಸರ್ವೆ ನಂ. 10ರಲ್ಲಿರುವ 13–20ಎಕರೆ ಜಮೀನಿನಲ್ಲಿ 5 ಎಕರೆಯನ್ನು ಕರ್ನಾಟಕ ಕ್ರೀಡಾ ಪ್ರಾಧಿಕಾರಕ್ಕೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ ಇವರ ಕಡತ ಸಂಖ್ಯೆ: DTR/PLN/CSS/CD Land/47/2005-06.

**ಪ್ರಸ್ತಾವನೆ:**

ಮೇಲೆ ಓದಲಾದ ಕಡತದಲ್ಲಿ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ ರವರು ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ತಾಲ್ಲೂಕಿನ ಕಸಬಾ ಹೋಬಳಿ ಹುಲಿಗುಂದಿ ಗ್ರಾಮದ ಸರ್ವೆ ನಂ. 10/2ರಲ್ಲಿರುವ 13–20 ಎಕರೆ ಜಮೀನನ್ನು

ಪ್ರವಾಸೋದ್ಯಮ ಅಭಿವೃದ್ಧಿಗಾಗಿ ಪ್ರವಾಸೋದ್ಯಮ ಇಲಾಖೆಗೆ ಚಿತ್ರದುರ್ಗ ಜಿಲ್ಲಾಧಿಕಾರಿಗಳು ಮಂಜೂರು ಮಾಡಿರುವುದಾಗಿ ತಿಳಿಸಿದ್ದಾರೆ. ಈ ಜಿಲ್ಲೆಯಲ್ಲಿ ಸಾಹಸ ಕ್ರೀಡೆಗಳ ಸಮಾವೇಶ ನಡೆಸುವ ಸಂಬಂಧ ಸೂಕ್ತ ನಿವೇಶನ ನೀಡಬೇಕೆಂದು ಆಯುಕ್ತರು, ಯುವಜನ ಮತ್ತು ಕ್ರೀಡೆ ಹಾಗು ಮಹಾ ನಿರ್ದೇಶಕರು ಕರ್ನಾಟಕ ಕ್ರೀಡಾ ಪ್ರಾಧಿಕಾರ, ಬೆಂಗಳೂರು ರವರು ಚಿತ್ರದುರ್ಗ ಜಿಲ್ಲಾಧಿಕಾರಿಗಳನ್ನು ಕೋರಿರುವುದಾಗಿ ತಿಳಿಸಿದ್ದಾರೆ. ಈ ಸಂಬಂಧ ಚಿತ್ರದುರ್ಗ ಜಿಲ್ಲಾಧಿಕಾರಿಗಳು ಪ್ರವಾಸೋದ್ಯಮ ಅಭಿವೃದ್ಧಿಗಾಗಿ ಇಲಾಖೆಗೆ ಹಸ್ತಾಂತರಿಸಲಾದ ಹುಲಿಗುಂದಿ ಗ್ರಾಮದ ಸರ್ವೆ ನಂ 10/2ರಲ್ಲಿರುವ 13.20 ಎಕರೆ ಜಮೀನಿನಲ್ಲಿ 5.00ಎಕರೆ ಜಮೀನನ್ನು ಆಯುಕ್ತರು, ಯುವಜನ ಸೇವೆ ಮತ್ತು ಕ್ರೀಡೆಗಳನ್ನು ನಡೆಸಲು ಇಲಾಖೆಗೆ ಸಾಹಸ ಕ್ರೀಡಾ ಇಲಾಖೆಗೆ ಹಸ್ತಾಂತರಿಸಲು ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಕಸಂವಾಪ್ರ 415 ಪ್ರವಾಯೋ 2008, ಬೆಂಗಳೂರು, ದಿನಾಂಕ:20ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ ತಾಲ್ಲೂಕಿನ ಕಸಬಾ ಹೋಬಳಿ ಹುಲಿಗುಂದಿ ಗ್ರಾಮದ ಸರ್ವೆ ನಂ. 10/2ರಲ್ಲಿರುವ 13.20ಎಕರೆ ಜಮೀನಿನಲ್ಲಿ 5.00 ಎಕರೆ ಜಮೀನನ್ನು ಸಾಹಸ ಕ್ರೀಡೆಗಳನ್ನು ನಡೆಸಲು ಆಯುಕ್ತರು, ಯುವಜನ ಸೇವೆ ಮತ್ತು ಕ್ರೀಡಾ ಇಲಾಖೆಗೆ ಹಸ್ತಾಂತರಿಸಲು ಕಂದಾಯ ಇಲಾಖೆಗೆ ಮರಳಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1347

**ಎಸ್. ನಾರಾಯಣಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ಹೊಳೇನರಸೀಪುರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆ (ಪರಿಷ್ಕೃತ–1)ಗೆ ಸರ್ಕಾರದ ಅಂತಿಮ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ:ನಅಇ 212 ಮೈಅಪ್ರಾ 2006 ಬೆಂಗಳೂರು ದಿ:8–6–2006

2. ಹೊಳೆನರಸೀಪುರ ಪುರಸಭಾ ಯೋಜನಾ ಪ್ರಾಧಿಕಾರದ ಪತ್ರ ಸಂ:ಮಯೋಪ್ರಾ:ಹೊ.ಸ.ಪುರ ಮಾಪ್ಲಾ (ಪ–1):08–09 ದಿ:14.7.2008.

3. ನಗರ ಯೋಜನಾ ನಿರ್ದೇಶಕರ ಕಾರ್ಯಾಲಯದ ಏಕ ಕಡತ ಸಂ.ನಯೋ (20). ಹೊ.ನ.ಪುರ.ಮಾಪ್ಲಾ (ಪ–1):24/6:06

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಹೊಳೆನರಸೀಪುರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಿ ಆದೇಶಸಿದೆ.

ಮೇಲೆ ಓದಲಾದ (2) ರ ಪತ್ರದಲ್ಲಿ ಹೊಳೆನರಸೀಪುರ ಪುರಸಭಾ ಯೋಜನಾ ಪ್ರಾಧಿಕಾರವು ಹೊಳೆನರಸೀಪುರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾ ಯೋಜನೆ (ಪರಿಷ್ಕೃತ–1)ಯ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1)ರನ್ವಯ ಅಗತ್ಯ ಕ್ರಮ ಜರುಗಿಸಿ, ಮಹಾ ಯೋಜನೆ (ಪರಿಷ್ಕೃತ–1)ಯ ನಕ್ಷೆಗಳನ್ನು ಹಾಗೂ ವರದಿಯನ್ನು ತಯಾರಿಸಿ ಸರ್ಕಾರದ ಅಂತಿಮ ಅನುಮೋದನೆಗಾಗಿ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (3)ರ ನಗರ ಯೋಜನಾ ನಿರ್ದೇಶಕರ ಕಛೇರಿಯ ಏಕೆ ಕಡತದಲ್ಲಿ ಹೊಳೆನರಸೀಪುರ ಪಟ್ಟಣದ ಜನಸಂಖ್ಯೆಯು 2021ರಲ್ಲಿ 65,000 ಗಳಿಗೆ ಬೆಳವಣಿಗೆಯಾಗುವುದಾಗಿ ಅಂದಾಜಿಸಿ, ಮಹಾಯೋಜನೆಯನ್ನು (ಪರಿಷ್ಕೃತ–1) ತಯಾರಿಸಲಾಗಿದೆ. ಹೊಳೇನರಸೀಪುರ ಸ್ಥಳೀಯ ಯೋಜನಾ ಪ್ರದೇಶದ 780 ಹೆಕ್ಟೇರ್ ಪ್ರದೇಶದಲ್ಲಿ 550.94 ಹೆಕ್ಟೇರ್ ಪ್ರದೇಶವನ್ನು ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 12ರಲ್ಲಿನ ಅಂಶಗಳನ್ನು ಪರಿಗಣಿಸಿ, ಪಟ್ಟಣದ ಮುಂದಿನ ಯೋಜಿತ ಬೆಳವಣಿಗೆಗಳಿಗಾಗಿ ಪ್ರಸ್ತಾಪಿಸಿರುವ 550.94 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 265.28 ಹೆಕ್ಟೇರ್ (ಶೇ. 48.15), ವಾಣಿಜ್ಯಕ್ಕಾಗಿ 25.91 ಹೆಕ್ಟೇರ್ (ಶೇ. 04. 70), ಕೈಗಾರಿಕೆಗಾಗಿ 24.71 ಹೆಕ್ಟೇರ್ (ಶೇ 04.48), ಸಾರ್ವಜನಿಕ:ಅರೆ ಸಾರ್ವಜನಿಕ ವಲಯಕ್ಕಾಗಿ

28.84 ಹೆಕ್ಟೇರ್ (ಶೇ. 5.23), ನಾಗರೀಕ ಸೌಲಭ್ಯಕ್ಕಾಗಿ 02.07 ಹೆಕ್ಟೇರ್ (ಶೇ. 00. 38), ಉದ್ಯಾನವನ:ಬಯಲು ಜಾಗೆಗಾಗಿ 60.77 ಹೆಕ್ಟೇರ್ (ಶೇ. 11.03), ಸಾರಿಗೆ ಮತ್ತು ಸಂಪರ್ಕ ವಲಯಕ್ಕೆ 143.36 ಹೆಕ್ಟೇರ್ (ಶೇ. 26.03) ಪ್ರದೇಶವನ್ನು ನಿಗಧಿಪಡಿಸಲಾಗಿದೆ. ಮಹಾ ಯೋಜನೆಯನ್ನು (ಪರಿಷ್ಕೃತ–1) ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(3)ರನ್ವಯ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತದ. ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 490 ಮೈಅಪ್ರಾ 2008, ಬೆಂಗಳೂರು, ದಿನಾಂಕ:23ನೇ ಸೆಪ್ಟೆಂಬರ್ 2008**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಹೊಳೇನರಸೀಪುರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾಯೋಗನೆಗೆ (ಪರಿಷ್ಕೃತ–1) ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(3) ರನ್ವಯ ಅಂತಿಮ ಅನುಮೋದನೆಯನ್ನು ನೀಡಲಾಗಿದೆ. ಮಹಾ ಯೋಜನೆಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1349

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವಾಲಯ

**ವಿಷಯ:** ಪ್ರಧಾನಮಂತ್ರಿ ಗ್ರಾಮ ಸಡಕ್ ಯೋಜನೆಯ ಅನುಷ್ಠಾನದ ಸಂಬಂಧ ನೂತನವಾಗಿ ಸ್ಥಾಪನೆಗೊಂಡಿರುವ ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯ ವಿಭಾಗಗಳು ಹಾಗೂ ಉಪ ವಿಭಾಗಗಳಲ್ಲಿನ ವಿವಿಧ ಹುದ್ದೆಗಳ ವೇತನ ಶ್ರೇಣಿ ನಿಗಧಿ ಪಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ–77 :ಜಿಪಅ:08:ಬೆಂ:ದಿನಾಂಕ:4.9.2008

2. ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ:ಮುಇಂ:ಪಂರಾಇಂಇ:ಸಿ–5:2008–09 ದಿನಾಂಕ:10–9–2008.

**ಪ್ರಸ್ತಾವನೆ:**

ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯನ್ನು ರಾಜ್ಯದಲ್ಲಿ ಪರಿಣಾಮಕಾರಿಯಾಗಿ, ವ್ಯವಸ್ಥಿತವಾಗಿ ಹಾಗೂ ಕಾಲ ಮಿತಿಯೊಳಗೆ ಅನುಷ್ಠಾನಗೊಳಿಸಲು ಅನುಕೂಲವಾಗುವಂತೆ 19 ನೂತನ ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯ ವಿಭಾಗಗಳ ಹಾಗೂ ಹಾಲಿ ಅಸ್ಥಿತ್ವದಲ್ಲಿರುವ 26 ಯೋಜನಾ ಉಪವಿಭಾಗಗಳ ಜೊತೆಗೆ ಇನ್ನೂ 6 ನೂತನ ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯ ಉಪ ವಿಭಾಗಗಳನ್ನು ಸೃಜಿಸಿ, ಮೇಲೆ (1)ರಲ್ಲಿ ಓದಲಾದ ದಿನಾಂಕ: 4.9.2008ರ ಆದೇಶವನ್ನು ಹೊರಡಿಸಿದೆ. ಈ ರೀತಿ ಸೃಜನೆಗೊಂಡಿರುವ ಪ್ರತಿ ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯ ವಿಭಾಗಕ್ಕೆ ವಿವಿಧ ತಾಂತ್ರಿಕ ಹಾಗೂ ತಾಂತ್ರಿಕೇತರ ಅಧಿಕಾರಿ ಹಾಗೂ ನೌಕರರುಗಳ ಹುದ್ದೆಗಳು ಅಂದರೆ ಕಾರ್ಯಪಾಲಕ ಇಂಜಿನಿಯರ್, ತಾಂತ್ರಿಕ ಸಹಾಯಕ, (ಸಹಾಯಕ ಕಾರ್ಯಪಾಲಕ ಇಂಜಿನಿಯರ್) ಸಹಾಯಕ ಇಂಜಿನಿಯರ್, ಲೆಕ್ಕಾಧೀಕ್ಷಕರು, ಪ್ರಥಮ ದರ್ಜೆ ಲೆಕ್ಕ ಸಹಾಯಕ, ಪ್ರಥಮ ದರ್ಜೆ ಸಹಾಯಕ, ಡಾಟಾ ಎಂಟ್ರಿ ಆಪರೇಟರ್/ ಸಹಾಯಕರು, ಗ್ರೂಪ್–ಡಿ/ಕಾವಲುಗಾರ, ಹಾಗೂ ಚಾಲಕರ ಒಟ್ಟಾರೆ 12 ಹುದ್ದೆಗಳನ್ನು ಹಾಗೂ ಇದೇ ರೀತಿ ನೂತನವಾಗಿ ಸೃಜನೆಗೊಂಡಿರುವ ಪ್ರತಿ ಉಪವಿಭಾಗಕ್ಕೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಸಹಾಯಕ ಇಂಜಿನಿಯರ್, ಕಿರಿಯ ಇಂಜಿನಿಯರ್, ಪ್ರಥಮ ದರ್ಜೆ ಲೆಕ್ಕ ಸಹಾಯಕ, ಪ್ರಥಮ ದರ್ಜೆ ಸಹಾಯಕ, ಡಾಟಾ ಎಂಟ್ರಿ ಅಪರೇಟರ್/ಸಹಾಯಕರು, ಗ್ರೂಪ್–ಡಿ/ಕಾವಲುಗಾರ ಮತ್ತು ಚಾಲಕರ ಒಟ್ಟಾರೆ 17 ಹುದ್ದೆಗಳನ್ನು ಸೃಜಿಸಿ, ಆದೇಶ ಹೊರಡಿಸಲಾಗಿದೆ. ಈ ರೀತಿ ಸೃಜನೆಗೊಂಡ ವಿವಿಧ ಹುದ್ದೆಳಿಗೆದುರಿಗೆ ಸದರಿ ಹುದ್ದೆಗಳನ್ನು ಹೊಂದಿರುವ ಅಧಿಕಾರಿ/ನೌಕರರ ವೇತನ ಭತ್ಯೆ ಡ್ರಾ ಮಳಲು ಅನುಕೂಲವಾಗುವಂತೆ ವೇತನ ಶ್ರೇಣಿಗಳನ್ನು ಅಳವಡಿಸಿ, ಆದೇಶ ಹೊರಡಿಸುವ ಬಗ್ಗೆ ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರು ಮೇಲೆ (2)ರಲ್ಲಿ ಓದಲಾದ ತಮ್ಮ ದಿನಾಂಕ:10.9.2008ರ ಪತ್ರದಲ್ಲಿ ಕೋರಿರುತ್ತಾರೆ.

ಮುಖ್ಯ ಇಂಜಿನಿಯರ್ ರವರ ಪ್ರಸ್ತಾವನೆಯನ್ನು ಸಮಗ್ರವಾಗಿ ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ:

**ಸರ್ಕಾರಿ ಆದೇಶ ಸಂಖ್ಯೆ:ಗ್ರಾಅಪ 77 ಜಿಪಅ 08(ಭಾ), ಬೆಂಗಳೂರು, ದಿನಾಂಕ:23ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನಲೆಯಲ್ಲಿ ಹಾಗೂ ದಿನಾಂಕ:4.9.2008ರ ಆದೇಶದ ಮುಂದುವರಿಕೆಯಲ್ಲಿ ನೂತನವಾಗಿ ಸೃಜನೆಗೊಂಡಿರುವ ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯ ವಿಭಾಗಗಳ ಹಾಗೂ ಉಪ ವಿಭಾಗಗಳಲ್ಲಿನ ವಿವಿಧ ವೃಂದ/ಹುದ್ದೆಗಳಿಗೆ ಅವುಗಳ ಎದುರಿಗೆ ತೋರಿಸಿರುವ ವೇತನ ಶ್ರೇಣಿಯನ್ನು ಈ ಕೆಳಕಂಡಂತೆ ನಮೂದಿಸಿ, ಆದೇಶಿಸಿದೆ:

1) ಪ್ರತಿ ನೂತನ ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯ ವಿಭಾಗದಲ್ಲಿನ ಹುದ್ದೆ ಹಾಗೂ ಸದರಿ ಹುದ್ದೆಗಳ ವೇತನ ಶ್ರೇಣಿ:

| ಕ್ರ.ಸಂ | ಹುದ್ದೆಯ ಹೆಸರು | ವೇನತ ಶ್ರೇಣಿ |
|---|---|---|
| 1 | ಕಾರ್ಯಪಾಲಕ ಇಂಜಿನಿಯರ್ | 18150–26925 |
| 2 | ತಾಂತ್ರಿಕ ಸಹಾಯಕ (ಸ.ಕಾ.ಇಂ) | 14050–25050 |
| 3 | ಸಹಾಯಕ ಇಂಜಿನಿಯರ್ | 11400–21600 |
| 4 | ಲೆಕ್ಕಾಧೀಕ್ಷಕರು | 10000–18150 |
| 5 | ಪ್ರಥಮ ದರ್ಜೆ ಲೆಕ್ಕ ಸಹಾಯಕ | 7275–13350 |
| 6 | ಪ್ರಥಮ ದರ್ಜೆ ಸಹಾಯಕ | 7275–13350 |
| 7 | ಡಾಟಾ ಎಂಟ್ರಿ ಅಪರೇಟರ್/ಸಹಾಯಕರು | 5800–10500 |
| 8 | ಗ್ರೂಪ್ ಡಿ/ಕಾವಲುಗಾರ | 4800–7225 |
| 9 | ಚಾಲಕ | 5800–10500 |

2) ಪ್ರತಿ ನೂತನ ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯ ಉಪವಿಭಾಗದಲ್ಲಿನ ಹುದ್ದೆ ಹಾಗೂ ಸದರಿ ಹುದ್ದೆಗಳ ವೇತನ ಶ್ರೇಣಿ:

| ಕ್ರ.ಸಂ | ಹುದ್ದೆಯ ಹೆಸರು | ವೇನತ ಶ್ರೇಣಿ |
|---|---|---|
| 1 | ಸಹಾಯಕ ಕಾರ್ಯಪಾಲಕ ಇಂಜಿನಿಯರ್ | 14050–25050 |
| 2 | ಸಹಾಯಕ ಇಂಜಿನಿಯರ್ | 11400–21600 |
| 3 | ಕಿರಿಯ ಇಂಜಿನಿಯರ್ | 8825–16000 |
| 4 | ಪ್ರಥಮ ದರ್ಜೆ ಲೆಕ್ಕ ಸಹಾಯಕ | 7275–13350 |
| 5 | ಪ್ರಥಮ ದರ್ಜೆ ಸಹಾಯಕ | 7275–13350 |
| 6 | ಡಾಟಾ ಎಂಟ್ರಿ ಆಪರೇಟರ್ /ಸಹಾಯಕರು | 5800–10500 |
| 7 | ಗ್ರೂಪ್ ಡಿ/ಕಾವಲುಗಾರ | 4800–7225 |
| 8 | ಚಾಲಕ | 5800–10500 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1350

**ಎನ್.ವೈ. ಸಾಗರ**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು–ಎ)

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

**ಸಮಾಜ ಕಲ್ಯಾಣ ಸಚಿವಾಲಯ**

**ತಿದ್ದುಪಡಿ ಆದೇಶ–2**

**ಸಂಖ್ಯೆ:ಸಕಇ 47 ಮೊದೇಶಾ 2008, ಬೆಂಗಳೂರು, ದಿನಾಂಕ:4ನೇ ಸೆಪ್ಟೆಂಬರ್ 2008**

2008–09ನೇ ಸಾಲಿಗೆ ಹೊಸದಾಗಿ 45 ಮೊರಾರ್ಜಿ ದೇಸಾಯಿ ವಸತಿ ಶಾಲೆಗಳನ್ನು ಮಂಜೂರು ಮಾಡಿ ಹೊರಡಿಸಲಾದ ಸರ್ಕಾರಿ ಆದೇಶ ಸಂಖ್ಯೆ:ಸಕಇ 47 ಮೊದೇಶಾ 2008 ಡಿ:22.8.2008 ಕ್ಕೆ ಈ ಕೆಳಕಂಡಂತೆ ಭಾಗಶಃ ಮಾರ್ಪಾಡು ಮಾಡಿ ಈ ಕೆಳಕಂಡಂತೆ ತಿದ್ದುಪಡಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆದೇಶಿಸಲಾಗಿದೆ.

**(ಆದೇಶದ ಉದ್ಧೃತ ಭಾಗ)**

**ಪರಿಶಿಷ್ಟ ಜಾತಿ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು**

| ದಿ:22.8.2008 ರ ಸರ್ಕಾರಿ ಆದೇಶ ಸಂಖ್ಯೆ:ಸಕಇ 47 ಮೊದೇಶಾ 2008ರಲ್ಲಿ ಆದೇಶಿಸಿದ್ದು | | | ಈ ಆದೇಶವನ್ನು ಪರಿಷ್ಕೃತಗೊಳಿಸಿ ಭಾಗಶಃ ಮಾರ್ಪಡಿಸಿ ತಿದ್ದುಪಡಿ ಮಾಡಿದ್ದು | | |
|---|---|---|---|---|---|
| ಜಿಲ್ಲೆ | ಕ್ರಮಸಂಖ್ಯೆ | ವಿಧಾನಸಭಾ ಕ್ಷೇತ್ರ | ಜಿಲ್ಲೆ | ಕ್ರಮಸಂಖ್ಯೆ | ವಿಧಾನಸಭಾ ಕ್ಷೇತ್ರ |
| ಶಿವಮೊಗ್ಗ | 6 | ತೀರ್ಥಹಳ್ಳಿ | ಶಿವಮೊಗ್ಗ | 6 | ತೀರ್ಥಹಳ್ಳಿ (ನಕ್ಸಲ್ ಪೀಡಿತ ಪ್ರದೇಶ) |

**ಹಿಂದುಳಿದ ವರ್ಗದ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು**

| ದಿ:22.8.2008 ರ ಸರ್ಕಾರಿ ಆದೇಶ ಸಂಖ್ಯೆ:ಸಕಇ 47 ಮೊದೇಶಾ 2008ರಲ್ಲಿ ಆದೇಶಿಸಿದ್ದು | | | ಈ ಆದೇಶವನ್ನು ಪರಿಷ್ಕೃತಗೊಳಿಸಿ ಭಾಗಶಃ ಮಾರ್ಪಡಿಸಿ ತಿದ್ದುಪಡಿ ಮಾಡಿದ್ದು | | |
|---|---|---|---|---|---|
| ಜಿಲ್ಲೆ | ಕ್ರಮಸಂಖ್ಯೆ | ವಿಧಾನಸಭಾ ಕ್ಷೇತ್ರ | ಜಿಲ್ಲೆ | ಕ್ರಮಸಂಖ್ಯೆ | ವಿಧಾನಸಭಾ ಕ್ಷೇತ್ರ |
| ತುಮಕೂರು | 3 | ಪಾವಗಡ | ತುಮಕೂರು | 3 | ಪಾವಗಡ (ನಕ್ಸಲ್ ಪೀಡಿತ ಪ್ರದೇಶ) |
| ಚಿಕ್ಕಮಗಳೂರು | 17 | ಮೂಡಿಗೆರೆ | ಚಿಕ್ಕಮಗಳೂರು | 17 | ಮೂಡಿಗೆರೆ (ನಕ್ಸಲ್ ಪೀಡಿತ ಪ್ರದೇಶ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1351

**ಎ.ಎಂ. ಚಿದಾನಂದಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಮಾಜ ಕಲ್ಯಾಣ ಇಲಾಖೆ

**ಜಲಸಂಪನ್ಮೂಲ ಸಚಿವಾಲಯ**

**ವಿಷಯ:** ಬೆಂಗಳೂರು ನಗರ ಜಿಲ್ಲೆಯ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿನ ವರ್ತೂರು ಮತ್ತು ಬೆಳ್ಳಂದೂರು ಕೆರೆಗಳನ್ನು ಅಭಿವೃದ್ಧಿಪಡಿಸಲು ಬೃಹತ್ ಬೆಂಗಳೂರು ಮಹಾನಗರಪಾಲಿಕೆಗೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:**
1. ಮುಖ್ಯ ಕಾರ್ಯದರ್ಶಿ ಅವರ ಅಧ್ಯಕ್ಷತೆಯಲ್ಲಿ ದಿನಾಂಕ:9.4.2008ರಂದು ನಡೆದ ಕೆರೆ ಅಭಿವೃದ್ಧಿ ಪ್ರಾಧಿಕಾರದ ಸಭೆಯ ನಡವಳಿ
2. ಪತ್ರ ಸಂ:ಸಿಇ/ಪಿ2/ಜಿಎಲ್/30/08–09 ದಿನಾಂಕ:26.4.2008
3. ಅನಧಿಕೃತ ಟಿಪ್ಪಣಿ ಸಂ:ಅಪಜೀ 18 ಇಎನ್ ವಿ 2008 ದಿನಾಂಕ:19.7.2008 ಮತ್ತು 16.8.2008
4. ಪತ್ರ ಸಂಖ್ಯೆ:ಮುಸದ/ತಾಂ1/ಸ ಇಂ1/2008–09/3181, ದಿನಾಂಕ:12.8.2008

**ಪ್ರಸ್ತಾವನೆ:**

ದಿನಾಂಕ: 9–4–2008ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಕೆರೆ ಅಭಿವೃದ್ಧಿ ಪ್ರಾಧಿಕಾರದ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದ ಹಿನ್ನಲೆಯಲ್ಲಿ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿರುವ ಬೆಂಗಳೂರು ನಗರ ಜಿಲ್ಲೆಯ ವರ್ತೂರು ಮತ್ತು ಬೆಳ್ಳಂದೂರು ಕೆರೆಗಳ ಅಭಿವೃದ್ಧಿ ಕೆಲಸ ನಿರ್ವಹಿಸುವ ಸಲುವಾಗಿ ಈ ಕೆರೆಗಳನ್ನು ಬೃಹತ್ ಬೆಂಗಳೂರು ಮಹಾನಗರಪಾಲಿಕೆಗೆ ಹಸ್ತಾಂತರಿಸುವಂತೆ ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರಪಾಲಿಕೆ ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ. ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯು ಮೇಲೆ (3)ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಈ ಕೆರೆಗಳನ್ನು ಬೃಹತ್ ಬೆಂಗಳೂರು ಮಹಾನಗರಪಾಲಿಕೆಗೆ ಅಭಿವೃದ್ಧಿಪಡಿಸಲು ಹಸ್ತಾಂತರಿಸುವಂತೆ ಕೋರಿದೆ.

ಬೆಂಗಳೂರು ನಗರ ಜಿಲ್ಲೆಯ ವರ್ತೂರು ಕೆರೆಯು 425 ಹೆಕ್ಟೇರು ಅಚ್ಚುಕಟ್ಟು ಹಾಗೂ 119 ಹೆಕ್ಟೇರು ಕೆರೆ ಅಂಗಳವನ್ನು ಹೊಂದಿದ್ದು, ಬೆಳ್ಳಂದೂರು ಕೆರೆಯು 526 ಹೆಕ್ಟೇರು ಅಚ್ಚುಕಟ್ಟು ಹಾಗೂ 365.44 ಹೆಕ್ಟೇರು ಕೆರೆ ಅಂಗಳವನ್ನು ಹೊಂದಿರುತ್ತದೆ. ಈ ಎರಡೂ ಕೆರೆಗಳು ಬೆಂಗಳೂರು ನಗರಕ್ಕೆ ಸಮೀಪವಾಗಿದ್ದು, ಕೆರೆಯಂಗಳದ ಒತ್ತುವರಿ ತಡೆಗಟ್ಟುವುದು ಬಹಳ ಅವಶ್ಯಕವಾಗಿರುತ್ತದೆ. ಈ ಎರಡೂ ಕೆರೆಗಳ ಕೆರೆಯಂಗಳದ ವಿಸ್ತೀರ್ಣವನ್ನು ಕಂದಾಯ ಇಲಾಖೆಯ ದಾಖಲಾತಿ

ಪ್ರಕಾರ ಸರ್ವೆ ಮಾಡಿಸಿ ತಂತಿ ಬೇಲಿ ನಿರ್ಮಿಸುವುದರಿಂದ ಕೆರೆಯ ಒತ್ತುವರಿಯನ್ನು ತಡೆಗಟ್ಟಬಹುದಾಗಿದೆ. ಅದಲ್ಲದೆ ಬೆಂಗಳೂರು ನಗರದ ತ್ಯಾಜ್ಯ ನೀರು ಕೆರೆಗೆ ಬಂದು ಪರಿಸರ ಮಾಲಿನ್ಯ ಉಂಟಾಗುತ್ತಿದೆ. ಈ ಕೆರೆ ಕಾಮಗಾರಿಯನ್ನು ನಿರ್ವಹಿಸಲು ಹೆಚ್ಚಿನ ಅನುದಾನದ ಅವಶ್ಯಕತೆ ಇರುವುದರಿಂದ ಸದರಿ ಕೆರೆಗಳನ್ನು ಅಭಿವೃದ್ಧಿಪಡಿಸಲು ಬೃಹತ್ ಬೆಂಗಳೂರು ಮಹಾನಗರಪಾಲಿಕೆಗೆ ಹಸ್ತಾಂತರಿಸುವುದು ಸೂಕ್ತವಾಗಿರುತ್ತದೆಂದು ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಅಭಿಯಂತರರು ಮೇಲೆ (4) ರಲ್ಲಿ ಓದಲಾದ ಪತ್ರದಲ್ಲಿ ಅಭಿಪ್ರಾಯವನ್ನು ತಿಳಿಸಿ ಈ ಬಗ್ಗೆ ಮುಂದಿನ ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸನೀಇ 88 ಮಸಾವಿ 2008 ಬೆಂಗಳೂರು, ದಿನಾಂಕ:20ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸಣ್ಣ ನಿರಾವರಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಬೆಂಗಳೂರು ನಗರ ಜಿಲ್ಲೆಯ ವರ್ತೂರು ಹಾಗೂ ಬೆಳ್ಳಂದೂರು ಕೆರೆಗಳನ್ನು ಅಭಿವೃದ್ಧಿಪಡಿಸುವ ಸಲುವಾಗಿ ಬೃಹತ್ ಬೆಂಗಳೂರು ಮಹಾನಗರಪಾಲಿಕೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಹಸ್ತಾಂತರಿಸಲು ಅನುಮೋದನೆ ನೀಡಿದೆ.

1) ಹಾಲಿ ಇರುವ ಕೆರೆಯ ಅಚ್ಚುಕಟ್ಟುದಾರರಿಗೆ ಯಾವುದೇ ತೊಂದರೆಯಾಗದಂತೆ ನೋಡಿಕೊಳ್ಳುವುದು;
2) ಕೆರೆಯ ಅಭಿವೃದ್ಧಿ ಕಾಮಗಾರಿಗಳನ್ನು ನಿರ್ವಹಿಸುವಾಗ ಕೆರೆಯ ಏರಿ, ತೂಬು, ಕೋಡಿಯ ಮೂಲ ಸ್ವರೂಪಕ್ಕೆ ಧಕ್ಕೆಯಾಗದಂತೆ ವಿನ್ಯಾಸ ಮತ್ತು ಮಾರ್ಪಾಟುಗಳ ಕಾರ್ಯನಿರ್ವಹಿಸುವುದು;
3) ಕಾಲಕಾಲಕ್ಕೆ ಅಭಿವೃದ್ಧಿ ಕಾಮಗಾರಿಗಳನ್ನು ನಿರ್ವಹಿಸುವುದು;
4) ಕೆರೆಯ ಹೂಳನ್ನು ಸಣ್ಣ ನೀರಾವರಿ ಇಲಾಖೆಯ ಅಧಿಕಾರಿಗಳೊಂದಿಗೆ ಚರ್ಚಿಸಿ ನಿಗದಿತ ಆಳಕ್ಕೆ ತೆಗೆದು ಅಭಿವೃದ್ಧಿಪಡಿಸುವುದು;
5) ಕೆರೆಯ ಅಂಗಳಕ್ಕೆ ಸಾರ್ವಜನಿಕರ ಭೇಟಿಗೆ ಯಾವುದೇ ನಿರ್ಬಂಧವನ್ನು ವಿಧಿಸಬಾರದು;
6) ಕೆರೆಯ ವ್ಯಾಪ್ತಿಯ ನೀರಾವರಿ ಪ್ರದೇಶಕ್ಕೆ ಹಾಗೂ ನೀರಾವರಿಗೆ ಯಾವುದೇ ಅಡೆತಡೆ ಉಂಟಾಗದಂತೆ ಹಾಲಿ ಇರುವ ಕಾಲುವೆಗಳನ್ನು ಸುಸ್ಥಿತಿಯಲ್ಲಿ ನಿರ್ವಹಿಸುವುದು;
7) ಕೆರೆಯನ್ನು ಯಾವುದೇ ಆರ್ಥಿಕ ಲಾಭಕ್ಕೆ ಬಳಸಿಕೊಳ್ಳಬಾರದು;
8 ಈ ಕೆರೆಯ ಮೂಲ ಸ್ವರೂಪಕ್ಕೆ ಧಕ್ಕೆಯಾದಲ್ಲಿ ಅದರ ವೆಚ್ಚವನ್ನು ಭರಿಸತಕ್ಕದ್ದು;
9) ಒಂದು ವೇಳೆ ಒತ್ತುವರಿಗಳಾಗಿದ್ದಲ್ಲಿ, ಒತ್ತುವರಿಯನ್ನು ತಡೆಗಟ್ಟಲು ಹಾಗೂ ತೆರವುಗೊಳಿಸಲು ಬೃಹತ್ ಬೆಂಗಳೂರು ಮಹಾನಗರಪಾಲಿಕೆಯವರು ಕಾನೂನು ಕ್ರಮ ತೆಗೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1352

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಒಇ 103 ಪೊಸಿಪ 2008(ಭಾ), ಬೆಂಗಳೂರು, ದಿನಾಂಕ:9ನೇ ಸೆಪ್ಟೆಂಬರ್ 2008**

ಸರ್ಕಾರದ ಆದೇಶ ಸಂಖ್ಯೆ:ಒಇ 103 ಪೊಸಿಪ 2008(ಭಾ) ದಿನಾಂಕ:27.8.2008 ರಲ್ಲಿಯ "ದಿನಾಂಕ: 19.7.2008 ರಂದು ಪುನರ್ ಪರಿಶೀಲಿಸಿದ ವೃಂದ ನಿರ್ವಹಣಾ ಪ್ರಾಧಿಕಾರವು" ಎಂಬುದರ ಬದಲು "ದಿನಾಂಕ:19.8.2008 ರಂದು ಪುನರ್ ಪರಿಶೀಲಿಸಿದ ವೃಂದ ನಿರ್ವಹಣಾ ಪ್ರಾಧಿಕಾರವು" ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1355

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ತಿದ್ದುಪಡಿ**

**ಸಂಖ್ಯೆ: ಒಇ 296 ಪೊಸಿಪ 2006, ಬೆಂಗಳೂರು, ದಿನಾಂಕ: 18ನೇ ಸೆಪ್ಟೆಂಬರ್ 2008**

ಸರ್ಕಾರದ ಆದೇಶ ಸಂಖ್ಯೆ:ಒಇ 296 ಪೊಸಿಪ 2006 ದಿನಾಂಕ:27.6.2008 ರ ಆದೇಶದ ಭಾಗದಲ್ಲಿನ ಕ್ರಮ ಸಂಖ್ಯೆ 4ರಲ್ಲಿ ದಿನಾಂಕ:1.4.2006 ರಿಂದ 14.6.2006ರ ವರೆಗಿನ 14 ದಿನಗಳನ್ನು " ಎಂಬುದರ ಬದಲಾಗಿ "ದಿನಾಂಕ:1.4.2006 ರಿಂದ 14.6.2006ರ ವರೆಗಿನ ಅವಧಿಯನ್ನು" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1356

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಕೃಷ್ಣಮೂರ್ತಿ ಗೋಪಾಲ್ ಪ್ರಾಚಾರ್ಯರು ಹಾಗೂ ಮಧುಕರ ಮತ್ತು ಶ್ರೀ ಮಹಮ್ಮದ್ ರುಕ್ಮುದ್ದೀನ್, ಪ್ರದಸ, ಭೂಮಾಪನ ತರಬೇತಿ ಸಂಸ್ಥೆ, ಗುಲ್ಬರ್ಗಾ ರವರ ವಿರುದ್ಧ ಇಲಾಖಾ ವಿಚಾರಣೆ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** 1. ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ:ತಾಂ. ತರಬೇತಿ 6/07–08 ದಿನಾಂಕ:4.6.2007.

2. ಸರ್ಕಾರದ ಆದೇಶ ಸಂ.ಕಂಇ 53 ಭೂದಾಸೇ (1) 2007, ದಿ:2.6.2007.

3. ನೋಟೀಸ್ ಸಂ.ಕಂಇ 53 ಭೂದಾಸೇ (1) 2007,ದಿ:26.2.2008.

4. ಅಧಿಸೂಚನೆ ಸಂ. ಕಂಇ 04 ಭೂದಾಸೇ(1) 2008 ದಿ:25.3.2008

5. ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ ರವರ ಪತ್ರ ಸಂ. ಸಿಬ್ಬಂದಿ ಶಿಸ್ತು 4/07–08 ದಿನಾಂಕ:4.3.2008

6. ಸರ್ಕಾರದ ಆದೇಶ ಸಂ.ಕಂಇ 53 ಭೂದಾಸೇ (1) 2007, ದಿನಾಂಕ:3.6.2008 ಮತ್ತು 10.7.2008.

7. ಶ್ರೀ ಮಹಮ್ಮದ್ ರುಕ್ಮುದ್ದೀನ್ ಮತ್ತು ಶ್ರೀ ಮಧುಕರ, ಪ್ರ.ದ.ಸ. ರವರ ಲಿಖಿತ ಹೇಳಿಕೆ ದಿನಾಂಕ:17.3.2008.

**ಪ್ರಸ್ತಾವನೆ:**

ಆಯುಕ್ತರು, ಭೂಮಾಪನ ಇಲಾಖೆ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ:4.6.2007ರ ಪತ್ರದಲ್ಲಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ಎಸ್.ಎಲ್.ಎಲ್.ಸಿ ಯಲ್ಲಿ ಉತ್ತೀರ್ಣರಾದ ಡಿ ಗುಂಪಿನ ನೌಕರರಿಗೆ ದ್ವಿತೀಯ ದರ್ಜೆ ಭೂಮಾಪಕರಾಗಿ ಮುಂಬಡ್ತಿ ನೀಡಲು ಅವಕಾಶ ಕಲ್ಪಿಸಿದ್ದು, ಅದರನ್ವಯ ಗುಲ್ಬರ್ಗಾ ಕೇಂದ್ರದಲ್ಲಿ 18 ಜನ ಶಿಕ್ಷಣಾರ್ಥಿಗಳನ್ನು 6 ತಿಂಗಳ ತರಬೇತಿಗಾಗಿ ನಿಯೋಜಿಸಲಾಗಿತ್ತು. ಈ ನಿಯೋಜನೆ ಪ್ರಕಾರ ತರಬೇತಿ ಕೇಂದ್ರದ ಪ್ರಾಂಶುಪಾಲರು ತರಬೇತಿ ನೀಡಿ ಅಂತಿಮವಾಗಿ ಪರೀಕ್ಷೆಯನ್ನು ನಡೆಸಿ ಫಲಿತಾಂಶ ಪ್ರಕಟಿಸಬೇಕಾಗಿರುತ್ತದೆ. ಆದರೆ ಪ್ರಾಚಾರ್ಯರು ಮತ್ತು ಸಿಬ್ಬಂದಿ ಪರೀಕ್ಷಾರ್ಥಿಗಳಿಗೆ ಸಾಮೂಹಿಕ ನಕಲು ಮಾಡಲು ಅವಕಾಶ ಮಾಡಿಕೊಟ್ಟಿರುವುದು. ಪರಿಶೀಲನೆಯಿಂದ ತಿಳಿದು ಬಂದಿದ್ದು ಈ ರೀತಿ ಅಕ್ರಮ ನಕಲು ಮಾಡಲು ಕಾರಣರಾದ ಸಂಸ್ಥೆಯ ಪ್ರಾಂಶುಪಾಲರಾದ ಶ್ರೀಕೃಷ್ಣಮೂರ್ತಿ ಗೋಪಾಲ್ ಹಾಗೂ ಕೊಠಡಿಯ ಮೇಲ್ವಿಚಾರಕರಾಗಿ ಕೆಲಸ ನಿರ್ವಹಿಸಿದ ಶ್ರೀ ರುಕ್ಮುದ್ದೀನ್, ಪ್ರಥಮ ದರ್ಜೆ ಸಹಾಯಕರು ಹಾಗೂ ಶ್ರೀ ಮಧುಕರ್, ಪ್ರಥಮ ದರ್ಜೆ ಸಹಾಯಕರು ಇವರ ವಿರುದ್ಧ ಶಿಸ್ತಿನಕ್ರಮ ಜರುಗಿಸಲು ವಿನಂತಿಸಿದ್ದರು. ಈ ರೀತಿ ಪ್ರಾಚಾರ್ಯರಾದ ಶ್ರೀ ಕೃಷ್ಣಮೂರ್ತಿ ಗೋಪಾಲ್ ಮತ್ತು ಪ್ರಥಮ ದರ್ಜೆ ಸಹಾಯಕರುಗಳಾದ, ಶ್ರೀ ಮಧುಕರ ಮತ್ತು ಶ್ರೀಮಹಮದ್ ರುಕ್ಮುದ್ದೀನ್ ರವರುಗಳು ಅಧಿಕಾರ ದುರುಪಯೋಗಪಡಿಸಿಕೊಂಡಿರುವುದು ಹಾಗೂ ಶಿಕ್ಷಣಾರ್ಥಿಗಳು ಪರೀಕ್ಷೆಯಲ್ಲಿ ಅಕ್ರಮವಾಗಿ ಸಾಮೂಹಿಕ ನಕಲು ಮಾಡಲು ಸಹಕರಿಸಿರುವ ದುರ್ನಡತೆ ಎಸಗಿರುವ ಅಂಶಗಳು ಕಂಡು ಬಂದ ಹಿನ್ನಲೆಯಲ್ಲಿ ಮೇಲೆ (2)ರಲ್ಲಿ ಓದಲಾದ ದಿನಾಂಕ:2.6.2007ರ ಸರ್ಕಾರದ ಆದೇಶದಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿಲ್ಲಿರಿಸಲಾಯ್ತು.

ಮೇಲೆ (3)ರಲ್ಲಿ ಓದಲಾದ ದಿನಾಂಕ:26.2.2008 ನೋಟೀಸ್‌ನಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 ಮತ್ತು 11(ಎ)ರನ್ವಯ ಆರೋಪ ಪಟ್ಟಿ (ಅನುಬಂಧ 1 ರಿಂದ 4) ಜೊತೆಯಲ್ಲಿ ಕಾರಣ ಕೇಳಿ ನೋಟೀಸ್ ಹೊರಡಿಸಲಾಯಿತು.

ಮೇಲೆ (4)ರಲ್ಲಿ ಓದಲಾದ ದಿನಾಂಕ:25.3.2008ರ ಅಧಿಸೂಚನೆಯಲ್ಲಿ ಶ್ರೀ ಕೃಷ್ಣಮೂರ್ತಿ ಗೋಪಾಲ್ ರವರ ಮೇಲಿನ ಅಮಾನತ್ತನ್ನು ತೆರವುಗೊಳಿಸಿ ಇಲಾಖಾ ವಿಚಾರಣೆ ಕಾಯ್ದಿರಿಸಿ ಪ್ರಾದೇಶಿಕ ತರಬೇತಿ ಸಂಸ್ಥೆ, ಮೈಸೂರಿನ ಪ್ರಾಚಾರ್ಯರ ಹುದ್ದೆಗೆ ನೇಮಕ ಮಾಡಲಾಯಿತು. ಹಾಗೂ ಮೇಲೆ (5)ರಲ್ಲಿ ಓದಲಾದ ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ ರವರ ಕೋರಿಕೆಯಂತೆ ಮೇಲೆ (6)ರಲ್ಲಿ ಓದಲಾದ ದಿನಾಂಕ:3.6.2008 ಮತ್ತು 10.7.2008ರ ಆದೇಶದಲ್ಲಿ ಶ್ರೀ ಮಧುಕರ, ಪ್ರಥಮ ದರ್ಜೆ ಸಹಾಯಕರು ಹಾಗೂ ಶ್ರೀ ಮಹಮ್ಮದ್ ರುಕ್ಮುದ್ದೀನ್, ಪ್ರಥಮ ದರ್ಜೆ ಸಹಾಯಕರು ರವರುಗಳ ವಿರುದ್ಧ ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತನ್ನು ತೆರವುಗೊಳಿಸಿ ಕ್ರಮವಾಗಿ ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ ಕಛೇರಿ, ಬೆಂಗಳೂರು ಹಾಗೂ ಭೂದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿ, ಗುಲ್ಬರ್ಗಾಕ್ಕೆ ಪುನರ್ ನೇಮಕ ಮಾಡಿ ಆದೇಶಿಸಿದೆ.

ಈ ಬಗ್ಗೆ ಆರೋಪಿತರುಗಳಾದ ಶ್ರೀ ಕೃಷ್ಣಮೂರ್ತಿ ಗೋಪಾಲ್, ಪ್ರಾಚಾರ್ಯರು, ಶ್ರೀ ಮಧುಕರ್ ಮತ್ತು ಶ್ರೀ ಮಹಮ್ಮದ್ ರುಕ್ಮುದ್ದೀನ್, ಪ್ರಥಮ ದರ್ಜೆ ಸಹಾಯಕರು ರವರುಗಳು ಕಾರಣ ಕೇಳಿ ನೋಟೀಸ್ ಪಡೆದು 5 ತಿಂಗಳುಗಳು ಕಳೆದರೂ ಸಹ ತಮ್ಮ ಲಿಖಿತ ಸಮಜಾಯಿಷಿ/ಹೇಳಿಕೆಯನ್ನು ನೀಡಿರುವುದಿಲ್ಲ. ಆದರೆ ಶ್ರೀ ಮಧುಕರ, ಪ್ರಥಮ ದರ್ಜೆ ಸಹಾಯಕರು ಹಾಗೂ ಶ್ರೀ ಮಹಮದ್ ರುಕ್ಮುದ್ದೀನ್, ಪ್ರಥಮ ದರ್ಜೆ ಸಹಾಯಕರು ರವರುಗಳು ಮೇಲೆ (6)ರಲ್ಲಿ ಓದಲಾದ ದಿನಾಂಕ:17.3.2008ರ ಲಿಖಿತ ಸಮಜಾಯಿಷಿ ನೀಡಿ.

"ಮಾನ್ಯ ಪ್ರಾಚಾರ್ಯರು, ಭೂಮಾಪನ ತರಬೇತಿ ಸಂಸ್ಥೆ,. ಗುಲ್ಬರ್ಗಾ ರವರ ಪತ್ರ ಸಂ.ತಾಂ.ಡಿ ಗ್ರೂಪ್.ಪ1/ 2007–08 ದಿನಾಂಕ:11.5.2007ರಲ್ಲಿ "ಡಿ" ಗ್ರೂಪ್ ಹುದ್ದೆಯಿಂದ ದ್ವಿತೀಯ ದರ್ಜೆ ಭೂಮಾಪಕರ ಹುದ್ದೆಗೆ ಮುಂಬಡ್ತಿ ಹೊಂದಿದ ಶಿಕ್ಷಣಾರ್ಥಿಗಳಿಗೆ ತರಬೇತಿ ನಂತರ ನಡೆಸಿದ ಅಂತಿಮ ಪರೀಕ್ಷೆಯ ಮೇಲ್ವಿಚಾರಕರೆಂದು ನೀಡಿದ ಆದೇಶದಂತೆ ತಮಗೆ ವಹಿಸಿಕೊಟ್ಟ ಪರೀಕ್ಷೆಯ ಕೊಠಡಿ ಮೇಲ್ವಿಚಾರಕರ ಕೆಲಸವನ್ನು ಅತೀ ಶ್ರದ್ಧೆ ಹಾಗೂ ಅತ್ಯಂತ ಬಿಗುವಿನ ವಾತಾವರಣದಲ್ಲಿ ನಕಲು ಅಥವಾ ಇನ್ನಾವುದೇ ಅವ್ಯವಹಾರಕ್ಕೆ ಅವಕಾಶ ಕೊಡದೆ ಅತಿ ಜಾಗ್ರತೆಯಿಂದ ನಿರ್ವಹಿಸಿದ್ದೇನೆ ಎಂದು ತಿಳಿಸುತ್ತಾ ತಮ್ಮ ಮೇಲೆ ಹೊರಿಸಿದ ಆರೋಪವನ್ನು ಅಲ್ಲಗಳೆಯುತ್ತಾ ತಮ್ಮನ್ನು ಆರೋಪಮುಕ್ತನನ್ನಾಗಿ ಮಾಡಲು ಕೋರಿರುತ್ತಾರೆ.

ಆರೋಪಿತರಿಗೆ ನೀಡಿದ ನೋಟೀಸ್‌ನ ನಿಗದಿತ ಕಾಲಾವಕಾಶ ಮುಗಿದಿರುವುದರಿಂದ ಹಾಗೂ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ಪ್ರಕರಣದ ವಿಚಾರಣೆಯನ್ನು ತ್ವರಿತವಾಗಿ ಪ್ರಾರಂಭಿಸಲು ನಿರ್ಧರಿಸಿ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಕ ಮಾಡಲು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 53 ಭೂದಾಸೇ (1) 2007, ಬೆಂಗಳೂರು, ದಿನಾಂಕ:8ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರಿ ಸೈಯದ್ ಇಲಿಯಾಸ್ ಅಹಮದ್, ಜಂಟಿ ನಿರ್ದೇಶಕರು (ವಿಚಾರಣೆ ಮತ್ತು ತನಿಖೆ) ಕೇಂದ್ರ ಕಛೇರಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶ್ರಿ ಟಿ., ರವೀಂದ್ರಪ್ಪ ಭೂಉನಿ (ಆಡಳಿತ), ಕೇಂದ್ರ ಕಛೇರಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಕ ಮಾಡಿ ಆದೇಶಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು 3 ತಿಂಗಳೊಳಗಾಗಿ ಪೂರೈಸಿ ಸರ್ಕಾರಕ್ಕೆ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1357

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ

**ವಿಷಯ:** ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ ವತಿಯಿಂದ ಮೈಸೂರು ಮತ್ತು ಗುಲ್ಬರ್ಗಾ ತರಬೇತಿ ಸಂಸ್ಥೆಗಳಲ್ಲಿ ನಡೆಸುತ್ತಿದ್ದ ಭೂಮಿ ಮತ್ತು ನಗರಮಾಪನ ಕುರಿತು ಟಿ (11) ಕೋರ್ಸನ್ನು ರದ್ದುಗೊಳಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ.ಆರ್‌ಡಿ 38 ಭೂದಾಸ 2007, ದಿನಾಂಕ:26.6.2007.

2. ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ತಾಂ, ತರಬೇತಿ 7/2006–07 ದಿನಾಂಕ:31.5.2008

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:26.6.2007ರ ಸರ್ಕಾರದ ಆದೇಶದಲ್ಲಿ 2007–08ನೇ ಸಾಲಿಗೆ ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಮೈಸೂರು ಮತ್ತು ಗುಲ್ಬರ್ಗಾ ತರಬೇತಿ ಕೇಂದ್ರಗಳಲ್ಲಿ ವೃತ್ತಿ ಶಿಕ್ಷಣ

ಇಲಾಖೆ ಸಹಕಾರದೊಂದಿಗೆ ಭೂಮಿ ಮತ್ತು ನಗರಮಾಪನ ಟಿ(11)1 ವರ್ಷದ ವೃತ್ತಿ ಶಿಕ್ಷಣ ಕೋರ್ಸನ್ನು ನಡೆಸಲು ಅನುಮತಿ ನೀಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ:31.5.2008ರ ಪತ್ರದಲ್ಲಿ ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ರವರು ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯನ್ನು ಆಧುನೀಕರಣಗೊಳಿಸಿ, ಪ್ರಗತಿಯನ್ನು ಕೊಂಡೊಯ್ಯುವ ನಿಟ್ಟಿನಲ್ಲಿ ಹೊಸ ತಂತ್ರಜ್ಞಾನವನ್ನು ಅಳವಡಿಸುವ ತೀವ್ರ ಅಗತ್ಯ ಕಂಡುಬಂದಿದ್ದು, ಇಲಾಖೆಯಲ್ಲಿ ಹಾಲಿ ಕೆಲಸ ಮಾಡುತ್ತಿರುವ ಎಲ್ಲಾ ತಾಂತ್ರಿಕ ಮತ್ತು ಲಿಪಿಕ ಸಿಬ್ಬಂದಿಗೆ ತಾಂತ್ರಿಕ ಹಾಗೂ ಆಡಳಿತಾತ್ಮಕ ವಿಚಾರಗಳಲ್ಲಿ ವಿವಿಧ ರೀತಿಯ ಆಧುನಿಕ ತರಬೇತಿಗಳನ್ನು ಇಲಾಖಾ ತರಬೇತಿ ಸಂಸ್ಥೆಗಳಲ್ಲಿಯೇ ನೀಡಲು ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು, ಅದರಂತೆ ಇಲಾಖಾ ನೌಕರರನ್ನು ತರಬೇತಿ ಸಂಸ್ಥೆಗಳ ತರಬೇತಿ ಕಾರ್ಯಕ್ರಮಗಳಲ್ಲಿ ಕಟ್ಟುನಿಟ್ಟಾಗಿ ತೊಡಗಿಸಬೇಕಾಗಿರುವುದರಿಂದ ಹಾಗೂ ಸರ್ಕಾರದ ಆದೇಶದಂತೆ ಹೊಸದಾಗಿ ಆಯ್ಕೆಯಾದ ಪರವಾನಗಿ ಭೂಮಾಪಕರಿಗೆ ದಿನಾಂಕ:2.5.2008ರಿಂದ ಇಲಾಖಾ ಸಂಬಂಧಿತ ತರಬೇತಿಯನ್ನು ನೀಡಲಾಗುತ್ತಿದೆ. ಜೊತೆಗೆ ಇತ್ತೀಚಿಗೆ ಲೋಕಸೇವಾ ಆಯೋಗದಿಂದ ಆಯ್ಕೆಯಾಗಿರುವ ದ್ವಿತೀಯ ದರ್ಜೆ ಭೂಮಾಪಕರಿಗೆ ವೃತ್ತಿ ಬುನಾದಿ ತರಬೇತಿಯನ್ನು ಕಡ್ಡಾಯವಾಗಿ ನೀಡಬೇಕಾಗಿರುವುದರಿಂದ ಇಲಾಖೆಯ ತರಬೇತಿ ಸಂಸ್ಥೆಗಳ ಬೋಧಕರು ಮತ್ತು ಇತರೆ ಸಿಬ್ಬಂದಿ ವರ್ಗ, ಪಾಠೋಪಕರಣಗಳು, ಪೀಠೋಪಕರಣಗಳು, ತರಗತಿಯ ಸ್ಥಳಾವಕಾಶಗಳು, ಸಾರಿಗೆ ವಸತಿ, ಆಹಾರ ಇತ್ಯಾದಿ ಮೂಲಭೂತ ಸಂಪನ್ಮೂಲಗಳ ಕೊರತೆಯನ್ನು ಎದುರಿಸುತ್ತಿರುವ ಸಂದರ್ಭಗಳಲ್ಲಿ ನಿಯಮಿತವಾಗಿ ವೃತ್ತಿ ಶಿಕ್ಷಣ ನಿರ್ದೇಶನಾಲಯದ ದಿನಾಂಕ:9.5.2008ರ ಅಧಿಸೂಚನೆಯಂತೆ ಇಲಾಖೆಯ ತರಬೇತಿ ಸಂಸ್ಥೆಗಳಲ್ಲಿ 2008–09ರ ಸಾಲಿಗೆ ಹಾಗೂ ಮುಂದೆಯೂ ಭೂಮಿ ಮತ್ತು ನಗರಮಾಪನ ಟಿ(11)ಕೋರ್ಸ್‌ನ್ನು ರದ್ದುಗೊಳಿಸಲು ಕೋರಿದ್ದಾರೆ.

ಈ ಬಗ್ಗೆ ಪ್ರಸ್ತಾವನೆಯನ್ನು ಪರಿಗಣಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 129 ಭೂದಾಸ 2008, ಬೆಂಗಳೂರು, ದಿನಾಂಕ:15ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ ಭೂಮಾಪನ ಇಲಾಖೆ ವತಿಯಿಂದ ಮೈಸೂರು ಮತ್ತು ಗುಲ್ಬರ್ಗಾ ತರಬೇತಿ ಕೇಂದ್ರಗಳಲ್ಲಿ ಸರ್ಕಾರಿ ಆದೇಶ ಸಂಖ್ಯೆ:ಕಂಇ 38 ಭೂದಾಸ 2007, ದಿ:26.6.2007ರನ್ವಯ ಪ್ರಾರಂಭಿಸಿ ನಡೆಸಲಾಗುತ್ತಿದ್ದ ಭೂಮಿ ಮತ್ತು ನಗರಮಾಪನ ಟಿ(11) 1 ವರ್ಷದ ಕೋರ್ಸ್‌ನ ತರಗತಿಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಿ ಮುಕ್ತಾಯಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1358

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂಮಾಪನ)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಕರ್ನಾಟಕ ಸಕ್ಕರೆ ಸಂಸ್ಥೆಗೆ 2008–9ನೇ ಸಾಲಿಗೆ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ಇವರ ಪತ್ರ ಸಂಖ್ಯೆ:ಕಸಸಂ/ಸಧ/2008–09, ದಿನಾಂಕ:25.7.2008

2. ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ ಬೆಳಗಾಂ ಇವರ ಪತ್ರ ಸಂಖ್ಯೆ–ಕಸಸಂ/ ಸಧ/ ಬಿಡುಗಡೆ/ 2008–09, ದಿನಾಂಕ:10.10.2008.

3. ಆಯುಕ್ತರು ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರು ರವರ ಪತ್ರ ಸಂಖ್ಯೆ:ಡಿಎಸ್ ಕೆ/ಇಎಸ್ ಟಿ/26/2007–08 ದಿನಾಂಕ:17.9.2008

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿರುವ ದಿನಾಂಕ:9.9.2008 ಪತ್ರ ಮತ್ತು ಓದಲಾದ (3)ರಲ್ಲಿರುವ ದಿನಾಂಕ:17.9.2008ರ ಪತ್ರಗಳಲ್ಲಿ ನಿರ್ದೇಶಕರು ಕರ್ನಾಟಕ ಸಕ್ಕರೆ ಸಂಸ್ಥೆ ಬೆಳಗಾಂ ಮತ್ತು ಆಯುಕ್ತರು ಕಬ್ಬು ಅಭಿವೃದ್ಧಿ ರವರು 2008–09ನೇ ಸಾಲಿನ ಅನುದಾನದಲ್ಲಿ ಕರ್ನಾಟಕ ಸಕ್ಕರೆ ಸಂಸ್ಥೆ ಬೆಳಗಾಂವರರಿಗೆ ಒದಿಸಲಾಗಿರುವ 50.00 ಲಕ್ಷರೂಗಳನ್ನು ಮಂಜೂರು ಮಾಡಿ ಬಿಡುಗಡೆ ಮಾಡಲು ಕೋರಿದ್ದಾರೆ.

ಮೇಲೆ ಓದಲಾದ (2)ರಲ್ಲಿರುವ ದಿನಾಂಕ:10–10–2008ರ ಪತ್ರದಲ್ಲಿ 2008–09ನೇ ಸಾಲಿನ ಪರಿಷ್ಕೃತ ಬಜೆಟ್‌ನಲ್ಲಿ ಕರ್ನಾಟಕ ಸಕ್ಕರೆ ಸಂಸ್ಥೆಗೆ 2008–09ನೇ ಸಾಲಿಗೆ ಕೇವಲ 5.00 ಲಕ್ಷರೂಗಳನ್ನು ಮಾತ್ರ ಒದಗಿಸಲಾಗಿದ್ದು ಈ ಹಣವನ್ನು ಸಂಸ್ಥೆಯ ನೌಕರರ ವೇತನದ ವೆಚ್ಚಗಳಿಗೆ ಉಪಯೋಗಿಸಿಕೊಳ್ಳುವುದಾಗಿ ತಿಳಿಸಿ, ಈ ಹಣವನ್ನು ಬಿಡುಗಡೆ ಮಾಡುವಂತೆ ನಿರ್ದೇಶಕರು ಕರ್ನಾಟಕ ಸಕ್ಕರೆ ಸಂಸ್ಥೆರವರು ಕೋರಿರುತ್ತಾರೆ.

ನಿರ್ದೇಶಕರು ಕರ್ನಾಟಕ ಸಕ್ಕರೆ ಸಂಸ್ಥೆ ಮತ್ತು ಆಯುಕ್ತರು ಕಬ್ಬು ಅಭಿವೃದ್ಧಿರವರ ಪ್ರಸ್ತಾವನೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಐ 173 ಎಸ್ ಜಿಎಫ್ 2008, ಬೆಂಗಳೂರು, ದಿನಾಂಕ:3ನೇ ನವೆಂಬರ್ 2008**

ನಿರ್ದೇಶಕರು ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ರವರು ಪ್ರಸ್ತಾವನೆಯಲ್ಲಿ ಕೋರಿರುವಂತೆ ಕರ್ನಾಟಕ ಸಕ್ಕರೆ ಸಂಸ್ಥೆಯ ನೌಕರರ ವೇತನದ ವೆಚ್ಚಗಳಿಗಾಗಿ ಈ ಸಂಸ್ಥೆಗೆ 2008–09ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2852–08–201–0–04–O-E–059 ರಲ್ಲಿ ಒದಗಿಸಲಾಗಿರುವ ರೂ. 5/ಲಕ್ಷಗಳನ್ನು (ಐದು ಲಕ್ಷ ರೂಪಾಯಿಗಳು ಮಾತ್ರ) ಮಂಜೂರು ಮಾಡಿ ಬಿಡುಗಡೆ ಮಾಡಲಾಗಿದೆ.

ಹಣ ಸಂದಾಯದ ರಸೀದಿ ಮೇಲೆ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಇವರ ಮೇಲು ರುಜು ಪಡೆದು ಸದರಿ ಹಣವನ್ನು ಡ್ರಾ ಮಾಡುವ ಅಧಿಕಾರವನ್ನು ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ಇವರಿಗೆ ನೀಡಲಾಗಿದೆ.

ಈ ಆದೇಶವನ್ನು ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1546

**ಪಿ. ಆನಂದ್‌ಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ:** ಕನ್ನಡ ಭವನ ಚಾಲುಕ್ಯ ವಿಭಾಗದ ಲಿಫ್ಟ್‌ನ ವಾರ್ಷಿಕ ನಿರ್ವಹಣಾ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಮೆ: ಓ.ಟಿ.ಐ.ಎಸ್. ಎಲೀವೇಟರ್ ಕಂಪನಿಯ ಪತ್ರ ಸಂಖ್ಯೆ ಎಲ್ 3597 ದಿನಾಂಕ:1–10–2007.
2. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅವರ ಪತ್ರ ಸಂಖ್ಯೆ:ಕನಾಅ :10:ನಯನ ಲಿಫ್ಟ್ :2007–08 ದಿನಾಂಕ:25.6.2008.

**ಪ್ರಸ್ತಾವನೆ:**

ಮೆ: ಓ.ಟಿ.ಐ.ಎಸ್. ಎಲೀವೇಟರ್ ಕಂಪನಿ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ:1.10.2007ರ ಪತ್ರದಲ್ಲಿ ಕನ್ನಡ ಭವನದಲ್ಲಿ ಚಾಲುಕ್ಯ ವಿಭಾಗದಲ್ಲಿ ಅಳವಡಿಸಿರುವ ಲಿಫ್ಟ್‌ನ ದಿನಾಂಕ:1.10.2007 ರಿಂದ 30.9.2008ರವರೆಗೆ ವಾರ್ಷಿಕ ನಿರ್ವಹಣೆಗೆ ರೂ. 44,101,00ಗಳು ಮತ್ತು ಅದರ ಮೇಲೆ ಶೇಕಡ 12.36% ರಷ್ಟು ಸೇವಾ ತೆರಿಗೆ ಸೇರಿಸಿ ಒಟ್ಟು ರೂ. 49.552.00 ಭರಿಸಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರನ್ನು ಕೋರಿರುತ್ತಾರೆ. ಮೇಲೆ (2)ರಲ್ಲಿ ಓದಲಾದ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ದಿನಾಂಕ:28.6.2008ರಲ್ಲಿ ಅವರು ಸದರಿ ಮೊತ್ತವನ್ನು ಮೆ: ಓ.ಟಿ.ಐ.ಎಸ್. ಎಲೀವೇಟರ್ ಕಂಪನಿ ಬೆಂಗಳೂರು ಇವರಿಗೆ ಪಾವತಿಸಬೇಕಾಗಿರುವುದರಿಂದ ಸರ್ಕಾರಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಕಸಂವಾಪ್ರ 21 ಕಸನಿ 2008, ಬೆಂಗಳುರು, ದಿನಾಂಕ:20ನೇ ಅಕ್ಟೋಬರ್ 2008**

ಬೆಂಗಳೂರು ಜೆ.ಸಿ. ರಸ್ತೆಯಲ್ಲಿರುವ ಕನ್ನಡ ಭವನದ ಚಾಲುಕ್ಯ ವಿಭಾಗದಲ್ಲಿರುವ ಓ.ಟಿ.ಐ.ಎಸ್. ಎಲೀವೇಟರ್ ಲಿಫ್ಟ್‌ನ 2007–08ನೇ ಸಾಲಿನ ವಾರ್ಷಿಕ ನಿರ್ವಹಣೆಗೆ (ಅಂದರೆ ದಿನಾಂಕ:1.10.2007 ರಿಂದ 30.9.2008 ರವರೆಗೆ) ವೆಚ್ಚವಾಗುವ ರೂ. 49,552,00 (ರೂಪಾಯಿ ನಲ್ವತ್ತೊಂಭತ್ತು ಸಾವಿರದ ಐದು ನೂರ ಐವತ್ತೆರಡು ಮಾತ್ರ) ಗಳನ್ನು ಭರಿಸಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಇವರಿಗೆ ಈ ಮೂಲಕ ಸರ್ಕಾರದ ಅನುಮತಿ ನೀಡಲಾಗಿದೆ. ಈ ಸಂಬಂಧ ತಗಲುವ ವೆಚ್ಚಗಳನ್ನು 2008–09ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 4202–04–800–1–01–139 (ಯೋಜನೆ) ಇದರಡಿ ನಯನ ರಂಗಮಂದಿರ ನಿರ್ವಹಣೆಗೆ ನಿಗಧಿಪಡಿಸಿರುವ ರೂ. 5.00 ಲಕ್ಷ ಅನುದಾನದ ಮೊತ್ತದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಟಿಪ್ಪಣಿ ಸಂಖ್ಯೆ:ಇಡಿ 748 ಐಎಫ್ (ಬಿಎ) 2008 ದಿನಾಂಕ:11.7.2008ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1547

**ಎಂ.ಕೆ. ಭರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಸೇರ್ಪಡೆ

**ಸಂಖ್ಯೆ: ಸಿಆಸುಇ 12 ಹೆಚ್‌ಹೆಚ್‌ಎಲ್ 2007, ಬೆಂಗಳೂರು, ದಿನಾಂಕ: 13ನೇ ಅಕ್ಟೋಬರ್ 2008**

2008ನೇ ಸಾಲಿನಲ್ಲಿ ದಿನಾಂಕ:15.11.2008ರಂದು ಭಕ್ತ ಕನಕದಾಸ ಜಯಂತಿ ಆಚರಣೆ ಮಾಡುವುದರಿಂದ ರಾಜ್ಯದಾದ್ಯಂತ ಸಾರ್ವಜನಿಕ ರಜೆಯನ್ನು ಸರ್ಕಾರವು ಘೋಷಿಸಿದೆ. ಈ ರಜೆಯನ್ನು ಸರ್ಕಾರದ ಅಧಿಸೂಚನೆ–1 ರ ಸಂ:ಸಿಆಸುಇ 12 ಹೆಚ್‌ಹೆಚ್‌ಎಲ್ 2007, ದಿನಾಂಕ:4.12.2007ರಲ್ಲಿಯ ಕ್ರಮ ಸಂ:19ರ ನಂತರ ಈ ಕೆಳಗಿನ ಕ್ರಮ ಸಂಖ್ಯೆಯಂತೆ ಹೆಚ್ಚುವರಿಯಾಗಿ ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

| ಕ್ರಮ ಸಂಖ್ಯೆ | ದಿನಾಂಕ | ವಾರಗಳು | ಸಾರ್ವತ್ರಿಕ ರಜಾ ದಿನ |
|---|---|---|---|
| 19ಎ | 15.11.2008 | ಶನಿವಾರ | ಭಕ್ತ ಕನಕದಾಸ ಜಯಂತಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1437

**ಕೆ.ವಿ ರಾಮು**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ರಾಜ್ಯ ಶಿಷ್ಟಾಚಾರ–1)

### ಸೇರ್ಪಡೆ

**ಸಂಖ್ಯೆ: ಸಿಆಸುಇ 12 ಹೆಚ್‌ಹೆಚ್‌ಎಲ್ 2007, ಬೆಂಗಳೂರು, ದಿನಾಂಕ: 26ನೇ ಸೆಪ್ಟೆಂಬರ್ 2008**

ಭಾರತ ಸರ್ಕಾರದ ಒಳಾಡಳಿತ ವ್ಯವಹಾರಗಳ ಇಲಾಖೆಯ ಕ್ರಮಾಂಕ:20:25:26 ಪಿಯುಬಿ 1, ದಿನಾಂಕ: 15.6.1957ರ ಅಧಿಸೂಚನೆಯಲ್ಲಿ ಪ್ರಸ್ತಾಪಿಸಲಾಗಿರುವ ನೆಗೋಷಿಯಬಲ್ ಇನ್‌ಸ್ಟ್ರುಮೆಂಟ್ಸ್ ಆಕ್ಟ್ 1881ರ (1881ರ ಅಧಿನಿಯಮ ಸಂ. 26) 25ನೇ ಸೆಕ್ಷನ್ ನಲ್ಲಿರುವ ವಿವರಣೆಯಂತೆ ಈ ಕೆಳಗೆ ತಿಳಿಸಿರುವ

| | | | |
|---|---|---|---|
| 1 | 29.9.2008 | ಸೋಮವಾರ | ಮಹಾಲಯ ಅಮಾವಾಸ್ಯೆ |
| 2 | 8–10–2008 | ಬುಧವಾರ | ಮಹಾನವಮಿ ಆಯುಧ ಪೂಜಾ |
| 3 | 27–10–2008 | ಸೋಮವಾರ | ನರಕ ಚತುರ್ದಶಿ |

ಈ ಮೂರು ಹಬ್ಬಗಳಿಗೂ ಕರ್ನಾಟಕ ರಾಜ್ಯಾದ್ಯಂತ ಸಾರ್ವಜನಿಕ ರಜೆಯನ್ನು ಸರ್ಕಾರವು ಘೋಷಿಸಿದೆ. ಈ ರಜೆಗಳನ್ನು ಸರ್ಕಾರದ ಅಧಿಸೂಚನೆ–11ರ ಸಂಖ್ಯೆ:ಸಿಆಸುಇ 12 ಹೆಚ್ ಹೆಚ್ ಎಲ್ 2007, ದಿನಾಂಕ:4.12.2007ರಲ್ಲಿಯ ಕ್ರಮಸಂಖ್ಯೆ (10)(12) ಹಾಗೂ (13)ಗಳ ಕೆಳಗೆ ಈ ಕೆಳಗೆ ತಿಳಿಸಿರುವ ಕ್ರಮಸಂಖ್ಯೆಗಳಂತೆ ಹೆಚ್ಚುವರಿಯಾಗಿ ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

| ಕ್ರ.ಸಂ | ದಿನಾಂಕ | ವಾರಗಳು | ಸಾರ್ವತ್ರಿಕ ರಜಾ ದಿನಗಳು |
|---|---|---|---|
| 10(ಎ) | 29.9.2008 | ಸೋಮವಾರ | ಮಹಾಲಯ ಅಮಾವಾಸ್ಯೆ |
| 12(ಎ) | 8–10–2008 | ಬುಧವಾರ | ಮಹಾನವಮಿ ಆಯುಧ ಪೂಜಾ |
| 13(ಎ) | 27–10–2008 | ಸೋಮವಾರ | ನರಕ ಚತುರ್ದಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1438

**ಕೆ.ವಿ ರಾಮು**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ರಾಜ್ಯ ಶಿಷ್ಟಾಚಾರ–1)

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರಿ ಬಿ.ಜಿ. ನಾಯಕ್ ಸಹಾಯಕ ಸರ್ಕಾರಿ ಅಭಿಯೋಜಕರು, ಹೊಸನಗರ, ಇವರ ಪದೋನ್ನತಿ ಬಿಟ್ಟುಕೊಟ್ಟು, ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿಯೇ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ:ಒಇ 583 ಪಿಪಿಇ 2007 ದಿನಾಂಕ:25.7.2008.

2. ಶ್ರೀ ಬಿ.ಜಿ ನಾಯಕ್ ಇವರ ಮನವಿ ದಿನಾಂಕ:28.7.2008

3. ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ:ಡಿಪಿಎನ್ /ಸಿಶಾ–1/57/2008–09, ದಿನಾಂಕ:19.8.2008.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ:25.7.2008ರ ಸರ್ಕಾರದ ಅಧಿಸೂಚನೆ ಕ್ರ.ಸಂ. 3ರನ್ವಯ ಶ್ರೀ ಬಿ.ಜಿ. ನಾಯಕ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹೊಸನಗರ ಇವರಿಗೆ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 32ರ ಅನುಸಾರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಸ್ವತಂತ್ರ ಪ್ರಭಾರದಲ್ಲಿರಿಸಿ ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಮಂಗಳೂರು ವಿಭಾಗ, ಮಂಗಳೂರು ಇಲ್ಲಿಗೆ ಸ್ಥಳನಿಯುಕ್ತಿಗೊಳಿಸಲಾಗಿದೆ.

ಮೇಲೆ ಓದಲಾದ (2)ರ ದಿನಾಂಕ:28.7.2008ರ ಪತ್ರದಲ್ಲಿ ಶ್ರೀ ಬಿ.ಜಿ. ನಾಯಕ್ ಇವರಿಗೆ "ಸರ್ವಿಕಲ್ ಸ್ಪಾಂಡಿಲಾಯಿಟೀಸ್" ಎನ್ನುವ ಕಾಯಿಲೆಯಿಂದ ಬಳಲುತ್ತಿದ್ದು, ಪದೋನ್ನತಿ ಸೌಲಭ್ಯವನ್ನು ಸ್ವ–ಇಚ್ಛೆಯಿಂದ ಬಿಟ್ಟುಕೊಟ್ಟು, ಈಗ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳದಲ್ಲಿಯೇ ಮುಂದುವರೆಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (3)ರ ದಿನಾಂಕ:19.8.2008ರ ಪತ್ರದಲ್ಲಿ ಶ್ರೀ ಬಿ.ಜಿ. ನಾಯಕ್ ಇವರ ಕೋರಿಕೆಯಂತೆ ಅವರಿಗೆ ನೀಡಿರುವ ಮುಂಬಡ್ತಿಯನ್ನು ರದ್ದುಗೊಳಿಸಿ, ಪ್ರಸ್ತುತ ಅವರು ಕಾರ್ಯನಿರ್ವಹಿಸುತ್ತಿರುವ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹೊಸನಗರ ಹುದ್ದೆಯಲ್ಲೆಯೇ ಮುಂದುವರೆಸುವಂತೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 410 ಪಿಪಿಇ 2008, ಬೆಂಗಳೂರು, ದಿನಾಂಕ:6ನೇ ನವೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಶ್ರೀ ಬಿ.ಜಿ. ನಾಯಕ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹೊಸನಗರ ಇವರಿಗೆ ಸರ್ಕಾರದ ಅಧಿಸೂಚನೆಯ ನಂ. ಒಇ 583 ಪಿಪಿಇ 2007, ದಿನಾಂಕ:"25.7.2008ರ ಕ್ರ.ಸಂ 3ರಲ್ಲಿ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ ನಿಯಮ 32ರ ಅನುಸಾರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಸ್ವತಂತ್ರ ಪ್ರಭಾರದಲ್ಲಿರಿಸಿ ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಮಂಗಳೂರು ವಿಭಾಗ, ಮಂಗಳೂರು ಇಲ್ಲಿಗೆ ಸ್ಥಳನಿಯುಕ್ತಿ ಗೊಳಿಸಿರುವುದನ್ನು ರದ್ದುಗೊಳಿಸಿ ಇವರನ್ನು ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹೊಸನಗರ ಇಲ್ಲಿಯೇ ಮುಂದುವರೆಸಲಾಗಿದೆ.

ಉಳಿದಂತೆ ನಂ. ಒಇ 583 ಪಿಪಿಇ 2007, ದಿನಾಂಕ:25.7.2008ರ ಸರ್ಕಾರದ ಅಧಿಸೂಚನೆಯಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1549

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತದ ವೃಂದ ಮತ್ತು ನೇಮಕಾತಿ ನಿಯಮಗಳ ಪರಿಷ್ಕರಣೆ ಬಗ್ಗೆ ವೃಂದ ಪರಿಶೀಲನಾ ಸಮಿತಿ ರಚನೆ ಕುರಿತು ಆದೇಶ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಎಚ್.ಡಿ. 209 ಪೊಪೆಸೆ 94 ದಿ:27.1.1995.

2. ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತ, ಇವರ ಪತ್ರ ಸಂ:ಪಿಎಚ್.ಸಿ/ಇಎಸ್‌ಟಿ (1) 2007–08 ದಿ:24.7.2007

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತದ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ರೂಪಿಸಲಾಗಿರುತ್ತದೆ. ಪ್ರಸಕ್ತ ಸನ್ನಿವೇಶಕ್ಕನುಗುಣವಾಗಿ ಸದರಿ ನಿಯಮಾವಳಿಯನ್ನು ತಿದ್ದುಪಡಿ ಮಾಡಲು ಮೇಲೆ ಓದಲಾದ (2)ರ ಪತ್ರದಲ್ಲಿ ನಿಗಮದ ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುವರು, ಸದರಿ ಪ್ರಸ್ತಾವನೆಯನ್ನು ಪರಿಷ್ಕರಿಸಲು ಸರ್ಕಾರದ ಹಂತದಲ್ಲಿ ಒಂದು ಸಮಿತಿಯನ್ನು ರಚಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 106 ಪೊಪೆಸೆ 2007 ಬೆಂಗಳೂರು, ದಿನಾಂಕ:4ನೇ ನವೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತದ ವೃಂದ ಮತ್ತು ನೇಮಕಾತಿ ನಿಯಮಗಳ ಪರಿಷ್ಕರಣೆ ಕುರಿತು ಪರಿಶೀಲಿಸಲು ಈ ಕೆಳಕಂಡಂತೆ ವೃಂದ ಪರಿಶೀಲನಾ ಸಮಿತಿಯನ್ನು ರಚಿಸಿ ಆದೇಶಿಸಿದೆ.

| | | |
|---|---|---|
| 1 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, | ಅಧ್ಯಕ್ಷರು |
| 2 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ | ಸದಸ್ಯರು |
| 3 | ಸರ್ಕಾರದ ಕಾರ್ಯದರ್ಶಿ, ಸಿ.ಆ.ಸು.ಇ. | ಸದಸ್ಯರು |
| 4 | ಸರ್ಕಾರದ ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ | ಸದಸ್ಯರು |
| 5 | ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ | ಸದಸ್ಯರು |
| 6 | ಪೊಲೀಸ್ ಮಹಾ ನಿರ್ದೇಶಕರು ಮತ್ತು ಮಹಾ ನಿರೀಕ್ಷಕರು, ಬೆಂಗಳೂರು | ಸದಸ್ಯರು |
| 7 | ವ್ಯವಸ್ಥಾಪಕ ನಿರ್ದೇಶಕರು, ಕ.ರಾ.ಪೊ.ಗೃ.ನಿ.ನಿ. ನಿಯಮಿತ ಬೆಂಗಳೂರು | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1548

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಆರ್. ನಾಗರಾಜ್, ಸಿ.ಹೆಚ್.ಸಿ –567, ಕೋಟೆ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ (4) ಶಿಕ್ಷೆ:129:06 ಒ.ಬಿ.79:07: ದಿ:21.5.2007

2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ:12/ಅಪೀಲು/ ಸಿಬ್ಬಂದಿ –2/2007–08 ದಿನಾಂಕ:20.9.2007.

3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:27.1.2008.

4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು (2) 135:2007–08 ದಿನಾಂಕ:7.5.2008.

**ಪ್ರಸ್ತಾವನೆ:**

ಶ್ರೀ ಆರ್. ನಾಗರಾಜ್, ಸಿ..ಹೆಚ್.ಸಿ–567, ಕೋಟೆ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು)ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ದಿ:12.7.2006 ರಂದು ರಾತ್ರಿ 12.45 ಗಂಟೆ ಸಮಯದಲ್ಲಿ ಮೊಟ್ಟೆ ಸತೀಶ ಮತ್ತು ಗಣೇಶ ಇವರುಗಳು ಚಂದ್ರಿಕಾ ಬಾರ್ ಎಂಡ್ ರೆಸ್ಟೋರೆಂಟ್ ಮುಂಭಾಗ ಸರ್ಕಾರಿ ಕರ್ತವ್ಯದಲ್ಲಿದ್ದ ಪಿ.ಎಸ್.ಐ. ಶ್ರೀ ಹನುಮಂತರಾಯ ಅವರಿಗೆ ಅವಾಚ್ಯ ಶಬ್ದಗಳಿಂದ ಬೈದು ಜೀವ ಬೆದರಿಕೆ ಹಾಕಿ ಕರ್ತವ್ಯ ನಿರ್ವಹಿಸಲು ಅಡ್ಡಿಪಡಿಸಿದ್ದು, ಪಿ.ಎಸ್.ಐ. ರವರು ಅವರನ್ನು ಠಾಣೆಗೆ ಕರೆತಂದು ಅವರುಗಳ ವಿರುದ್ಧ ಗುನ್ನೆ ನಂ:137:06 ಕಲಂ 504 , 506(2), 186,353 ರೆಡ್ ವಿತ್ 34 ಐಪಿಸಿ ಪ್ರಕಾರ ಪ್ರಕರಣ ದಾಖಲಿಸಿ ನಿಮಗೆ ಸದರಿ ಆರೋಪಿ ಗಳನ್ನು ನೋಡಿಕೊಳ್ಳಲು ಹೇಳಿದಾಗ ನೀವುಗಳು ಪಿ.ಎಸ್.ಐ. ರವರಿಗೆ "ಈ ಲಫಂಗರನ್ನು ನಾವು ನೋಡಿಕೊಳ್ಳಲು ಆಗುವುದಿಲ್ಲ ಇವರು ಲೋಫರ್ಸ್ ಇದ್ದಾರೆ ನೀವು ಇವರನ್ನು ನೋಡಿಕೊಳ್ಳಲು ಎ.ಎಸ್.ಐ. ರವರನ್ನು ಕರೆಯಿಸು ಅಥವಾ ನೀವೇ ಕಾದುಕೊಂಡು ಇರಿ ಎಂದು ಉದ್ದಟತನದಿಂದ ಮಾತನಾಡಿ ಮೇಲಾಧಿಕಾರಿಗಳು ನೀಡಿದ ಆದೇಶ ಉಲ್ಲಂಘಿಸಿ, ಕರ್ತವ್ಯದಲ್ಲಿ ತೀವ್ರ ಅಶಿಸ್ತು ಮತ್ತು ದುರ್ನಡತೆ ಪ್ರದರ್ಶಿಸಿರುತ್ತೀರಿ"

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಇವರು ಮೇಲೆ ಕ್ರಮಸಂಖ್ಯೆ:(1)ರಲ್ಲಿ ಓದಲಾದ ದಿ:21–5–2007ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷಕಾಲ ಮುಂದೂಡಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸುವ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲ್ಮನವಿಯಲ್ಲಿನ ಅಂಶಗಳನ್ನು ಪರಿಶೀಲಿಸಿ ಅಪೀಲುದಾರರು ತನ್ನ ಮೇಲಾಧಿಕಾರಿಯೊಂದಿಗೆ ಉದ್ದಟತನದಿಂದ ಮಾತಾಡಿ, ಅವರು ನೀಡಿದ ಆದೇಶವನ್ನು ಉಲ್ಲಂಘೀಸಿ ಕರ್ತವ್ಯದಲ್ಲಿ ದುರ್ನಡತೆ ತೋರಿರುವ ಆರೋಪ ಸಾಬೀತಾಗಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಶಿಕ್ಷೆ ಅವರು ಮಾಡಿರುವ ಅಶಿಸ್ತಿನ ಉದ್ದಟತನಕ್ಕೆ ತಕ್ಕದಾಗಿರುತ್ತದೆ. ಎಂದು ಅದಾಗ್ಯೂ ಅನುಕಂಪದ ದೃಷ್ಟಿಯಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ಶೀಕ್ಷೆಯನ್ನು ಭಾಗಶಃ ಮಾರ್ಪಡಿಸಿ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಅವರ ಮುಂದಿನ ವೇತನ ಬಡ್ತಿತಿಗಳಿಗೆ ಧಕ್ಕೆಯಾಗದ ಹಾಗೆ ಮೂರು ತಿಂಗಳಕಾಲ ಮುಂದೂಡಿ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸುವ ದಂಡನೆಯನ್ನು ಮೇಲೆ ಕ್ರಮಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:20.9.2007ರ ಆದೇಶದಲ್ಲಿ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ದಿ:12.7.2006ರಂದು ರಾತ್ರಿ ಎಸ್.ಹೆಚ್.ಓ. ಆಗಿ ಶ್ರೀ ಆರ್. ನಾಗರಾಜ್, ಸಿ.ಹೆಚ್.ಸಿ–567, ಕರ್ತವ್ಯ ನಿರ್ವಹಿಸುತ್ತಿದ್ದು, ದಿ:12.7.2006 ರಂದು ರಾತ್ರಿ 12.45 ಗಂಟೆಯಲ್ಲಿ ಚಂದ್ರಿಕ ಬಾರ್ ಅಂಡ್ ರೆಸ್ಟೋರೆಂಟ್‌ನಲ್ಲಿ ಜಗಳ ವಾಡುತ್ತಿದ್ದ ಮೊಟ್ಟೆ ಸತೀಶ ಮತ್ತು ಗಣೇಶ ರವರು ಪಿ.ಎಸ್.ಐ. ರವರಿಗೆ ಅವಾಚ್ಯ ಶಬ್ದಗಳಿಂದ ಬೈದು ಜೀವ ಬೆದರಿಕೆ ಹಾಕಿ ಸರ್ಕಾರಿ ಕರ್ತವ್ಯ ನಿರ್ವಹಿಸಲು ಅಡ್ಡಿಪಡಿಸಿದ್ದರಿಂದ ಪಿ.ಎಸ್.ಐ. ರವರು ಅವರುಗಳನ್ನು ಇತರೆ ಸಿಬ್ಬಂದಿಗಳ ಸಹಾಯದಿಂದ ದಸ್ತಗಿರಿ ಮಾಡಿಕೊಂಡು ಠಾಣೆಗೆ ಕರೆತಂದು ಅವರುಗಳ ವಿರುದ್ಧ ಗುನ್ನೆ ನಂ. 137/06 ಕಲಂ :504, 506 (20 186, 353 ರೆಡ್ ವಿತ್ 34 ಐ.ಪಿ.ಸಿ ಪ್ರಕಾರ ಪ್ರಕರಣ ದಾಖಲು ಮಾಡಿ ಸುರಕ್ಷಿತ ಬಂಧನದಲ್ಲಿಟ್ಟು ಸಿಪಿಸಿ 960 ಎ.ಕೆ. ರಾಜಪ್ಪ ಮತ್ತು ಸಿಪಿಸಿ–899 ಜಯದೇವ ತುಮ್ಮನಿಕಟ್ಟೆ ಇವರನ್ನು ಆರೋಪಿಗಳ ಕಾವಲಿಗೆ ನೇಮಿಸಿ ಅಪೀಲುದಾರರಿಗೆ ಆರೋಪಿಗಳನ್ನು ಜಾಗ್ರತೆಯಾಗಿ ನೋಡಿಕೊಳ್ಳಲು ತಿಳಿಸಿದ್ದಾರೆ. ಆ ಸಂದರ್ಭದಲ್ಲಿ ಅಪೀಲುದಾರರು ಪಿ.ಎಸ್.ಐ. ರವರೊಂದಿಗೆ ಅಸಭ್ಯವಾಗಿ ವರ್ತಿಸಿರುತ್ತಾರೆ. ಈ ವಿಷಯವು ಪಿ.ಎಸ್.ಐ. ರವರ ವರದಿ ಮತ್ತು ಠಾಣಾ ದಿನಚರಿಯಿಂದ ವ್ಯಕ್ತವಾಗಿದ್ದು, ಆರೋಪಗಳು ಸಾಬೀತಾಗಿರುವುದರಿಂದ ಶಿಸ್ತು ಪ್ರಾಧಿಕಾರವು ಅವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ 1 ವರ್ಷ ಕಾಲ ಮುಂದೂಡಿ ಅಮಾನತ್ತಿನ ಅವಧಿ ದಿ:14.7.06 ರಿಂದ 17.11.06 ರ ವರೆಗಿನ 127 ದಿನಗಳನ್ನು ಅಮಾನತ್ತೆಂದೇ ಪರಿಗಣಿಸಿ ದಂಡನೆ ವಿಧಿಸಿರುತ್ತಾರೆ. ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಅನುಕಂಪದ ದೃಷ್ಟಿಯಿಂದ ಭಾಗಶಃ ಮಾರ್ಪಡಿಸಿ ಅಪೀಲುದಾರರ ಮುಂದಿನ ವೇತನ ಬಡ್ತಿಗಳಿಗೆ ಧಸಕ್ಕೆಯಾಗದ ಹಾಗೆ 3 ತಿಂಗಳ ಕಾಲ ಮುಂದೂಡಿ, ಅಮಾನತ್ತಿನ ಅವಧೀಯನ್ನು ಅಮಾನತ್ತೆಂದೇ ಪರಿಗಣಿಸಿ ಆದೇಶ ಹೊರಡಿಸಲಾಗಿದೆ. ಈ ದಂಡನೆಯನ್ನು ಪುನಃ ಕಡಿಮೆ ಮಾಡಲು ಪೂರಕವಾದ ದಾಖಲೆ/ಕಾರಣಗಳನ್ನು ಅರ್ಜಿದಾರರು ನೀಡಿರುವುದಿಲ್ಲ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 172 ಪೊಸಿಅ 2008, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್. ನಾಗರಾಜ್, ಸಿ.ಹೆಚ್.ಸಿ–567, ಕೋಟೆ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1550

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** ಬೀದರ್ ಜಿಲ್ಲೆಯಲ್ಲಿ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರ ಸ್ಥಾಪಿಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಜಿಲ್ಲಾಧಿಕಾರಿಗಳು, ಬೀದರ್ ಜಿಲ್ಲೆ, ಬೀದರ್ ಇವರ ಪತ್ರ ಸಂಖ್ಯೆ:ಅ.ಸ.ಪ.ಸಿಆರ್–7144/2008–09, ದಿನಾಂಕ:18.10.2008.

2. ಸರ್ಕಾರದ ಆದೇಶ ಸಂಖ್ಯೆ:ವಿಯಇ 39 ವಿತ್ರಮ 2008, ದಿ:14/05.2008.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿ ಜಿಲ್ಲಾಧಿಕಾರಿಗಳು, ಬೀದರ್ ಜಿಲ್ಲೆ, ಬೀದರ್ ಇವರ ಪತ್ರದಲ್ಲಿ ಬೀದರ್ ಜಿಲ್ಲಾಧಿಕಾರಿ ಅಧ್ಯಕ್ಷತೆಯಲ್ಲಿ ಬೀದರ್ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರ ಎಂಬ ಸೊಸೈಟಿ ಈಗಾಗಲೇ ಸ್ಥಾಪನೆಯಾಗಿದ್ದು, ಈ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರಕ್ಕೆ ಬೀದರ್ ನಗರದ ಸರ್ವೆ ನಂ. 11ರಲ್ಲಿ 1–34 ಗುಂಟೆ ಭೂಮಿಯನ್ನು ನೊಂದಾಯಿಸಲಾಗಿರುವುದಾಗಿ ತಿಳಿಸಿರುತ್ತಾರೆ. ಈ ಭೂಮಿಯಲ್ಲಿ ಕೇಂದ್ರ ಸರ್ಕಾರದ ಮಾರ್ಗಸೂಚಿಗಳಡಿಯಲ್ಲಿ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರ ಸ್ಥಾಪಿಸಲು ರಾಜ್ಯ ಸರ್ಕಾರದ ಸಹಾಯಾನುದಾನವನ್ನು ಬಿಡುಗಡೆ ಮಾಡಲು ಕೋರಿದ್ದಾರೆ.

ಮೇಲೆ ಓದಲಾದ (2)ರಲ್ಲಿನ ಸರ್ಕಾರಿ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು 2008–09ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 3425–60–200–0–20(101)(ಯೋಜನೆ)ಅಡಿಯಲ್ಲಿ ಜಿಲ್ಲಾ ವಿಜ್ಞಾನ ಕೇಂದ್ರಗಳಿಗೆ ಸಹಾಯಾನುದಾನವಾಗಿ ಒಟ್ಟು ರೂ. 100.00 ಲಕ್ಷಗಳ ಅನುದಾನವನ್ನು ಕಲ್ಪಿಸಲಾಗಿದೆ.

ಉದ್ದೇಶಿತ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರವನ್ನು ಸುಸೂತ್ರವಾಗಿ ನಡೆಸಿಕೊಂಡು ಹೋಗಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಬೀದರ್ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರ ರಚಿಸಿ ಅದಕ್ಕೆ ರೂಲ್ಸ್ ಮತ್ತು ರೆಗ್ಯುಲೇಶನ್‌ಗಳನ್ನು ಮತ್ತು ಮೆಮೋರಂಡಮ್ ಆಫ್ ಅಸೋಸಿಯೇಷನ್ ತಯಾರಿಸಿ, ಜಿಲ್ಲಾ ನೊಂದಣಾಧಿಕಾರಿಗಳಲ್ಲಿ ನೊಂದಾಯಿಸಲು ಹಾಗೂ ಸದರಿ ಸೊಸೈಟಿಯ ಆಡಳಿತ ನಿರ್ವಹಣೆಗಾಗಿ ಆಡಳಿತ ಮಂಡಳಿಯನ್ನು ಮತ್ತು ದೈನಂದಿನ ಕೆಲಸಕಾರ್ಯಗಳನ್ನು ನೋಡಿಕೊಳ್ಳಲು ಒಂದು ಕಾರ್ಯಕಾರಿ ಸಮಿತಿಯನ್ನು ರಚಿಸಿ, ಅವುಗಳಿಗೆ ಸರ್ಕಾರದ ಅನುಮೋದನೆಯನ್ನು ಪಡೆಯಲು ಜಿಲ್ಲಾಧಿಕಾರಿಗಳು, ಬೀದರ್ ಜಿಲ್ಲೆ ಬೀದರ್ ಇವರಿಗೆ ಸೂಚಿಸಲಾಗಿದೆ.

ಕೇಂದ್ರ ಸರ್ಕಾರದ ಮಾರ್ಗಸೂಚಿಗಳ ಅನ್ವಯ ಜಿಲ್ಲಾ ಮಟ್ಟದಲ್ಲಿ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರವನ್ನು ಸ್ಥಾಪಿಸಲು ಅನಾವರ್ತಕ ವೆಚ್ಚ ರೂ. 2.00 ಕೋಟಿಗಳನ್ನು ಕೇಂದ್ರದ ಪಾಲು ರೂ. 1.00 ಕೋಟಿ, ರಾಜ್ಯದ ಪಾಲು ರೂ. 1.00 ಕೋಟಿಯನ್ನು ಬಿಡುಗಡೆ ಮಾಡಬೇಕಾಗಿರುತ್ತದೆ.

ಕೇಂದ್ರದ ಪಾಲನ್ನು ನಿರೀಕ್ಷಿಸಿ ರಾಜ್ಯದ ಪಾಲನ್ನು ಬಿಡುಗಡೆ ಮಾಡುವ ಬಗ್ಗೆ ಮೇಲೆ ಓದಲಾದ (1)ರ ಪತ್ರದ ಅನ್ವಯವಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ವಿಯಇ 134 ವಿತ್ರಮ 2007, ಬೆಂಗಳೂರು, ದಿನಾಂಕ:20ನೇ ನವೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನಲೆಯಲ್ಲಿ ಬೀದರ್ ಜಿಲ್ಲಾ ಕೇಂದ್ರದಲ್ಲಿ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರವನ್ನು ಸ್ಥಾಪಿಸಲು ರಾಜ್ಯ ಸರ್ಕಾರದ ಪಾಲಿನ ರೂ. 100.00ಲಕ್ಷಗಳನ್ನು (ಒಂದು ನೂರು ಲಕ್ಷಗಳು ಮಾತ್ರ) ಜಿಲ್ಲಾಧಿಕಾರಿ, ಬೀದರ್ ಹಾಗೂ ಅಧ್ಯಕ್ಷರು, ಬೀದರ್ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿ. ಇವರಿಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲಾಗಿದೆ.

1 ಈ ಯೋಜನೆಗೆ ತಗಲುವ ಒಟ್ಟು ರೂ. 2.00 ಕೋಟಿಗಳ ಪೈಕಿ ಕೇಂದ್ರ ಸರ್ಕಾರದ ಪಾಲಿನ ರೂ. 1.00 ಕೋಟಿಗಳನ್ನು ಕೇಂದ್ರ ಸರ್ಕಾರವು ಬಿಡುಗಡೆ ಮಾಡಿದ ನಂತರ ಈ ಯೋಜನೆಯನ್ನು ಕೈಗೆತ್ತಿಕೊಳ್ಳತಕ್ಕದ್ದು.

2 ಒಂದು ವೇಳೆ ಕೇಂದ್ರ ಸರ್ಕಾರವು ಈ ಯೋಜನೆಗೆ ಒಪ್ಪದೇ ಇದ್ದ ಸಂದರ್ಭದಲ್ಲಿ ಈ ಯೋಜನೆಗೆ ಕೇಂದ್ರ ಸರ್ಕಾರವು ಭರಿಸಬೇಕಾದ ರೂ. 1.00 ಕೋಟಿಗಳನ್ನು ಈ ಯೋಜನೆಯ ಅನುಷ್ಠಾನಕ್ಕಾಗಿ ರಚಿಸಲು ಉದ್ದೇಶಿಸಲಾದ ಬೀದರ್ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರವು ಸಾರ್ವಜನಿಕ ದೇಣಿಗೆ ಇತ್ಯಾದಿ ಮೂಲಕ ಭರಿಸತಕ್ಕದ್ದು;

3 ಈ ಯೋಜನೆಯನ್ನು ಕೇಂದ್ರ ಸರ್ಕಾರದ ಹಾಗೂ ನ್ಯಾಷಿನಲ್ ಕೌನ್ಸಿಲ್ ಫಾರ್ ಸೈನ್ಸ್ ಮ್ಯೂಸಿಯಮ್ಸ್, ಕೋಲ್ಕತ್ತ ಇವರ ಮಾರ್ಗಸೂಚಿಗಳ ಪ್ರಕಾರ ನಿಗದಿತ ಅವಧಿಯೊಳಗಾಗಿ ಉದ್ದೇಶಿತ ಬೀದರ್ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರದ ಟ್ರಸ್ಟ್ ಮೂಲಕ ಅನುಷ್ಠಾನಗೊಳಿಸಿ ನಡೆಸಿಕೊಂಡು ಹೋಗತಕ್ಕದ್ದು.

4 ಈ ಯೋಜನೆಯ ಅನುಷ್ಠಾನದಲ್ಲಿ ಕೈಗೊಳ್ಳುವ ಎಲ್ಲಾ ಕಾಮಗಾರಿಗಳ ಅಂದಾಜಿಗೆ ಬೀದರ್ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿಯ ಆಡಳಿತ ಮಂಡಳಿಯ ಪೂರ್ವಾನುಮತಿ ಪಡೆದು ನಂತರ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ 1999 ಮತ್ತು ನಿಯಮಗಳು 2000 ಗಳ ಪ್ರಕಾರ ಅನುಷ್ಠಾನಗೊಳಿಸುವುದು.

5 ಈ ಅನುದಾನವನ್ನು ಈ ಉದ್ದೇಶಿತ ಕಾಮಗಾರಿಗಳನ್ನು ಹೊರತುಪಡಿಸಿ ಬೇರೆ ಕಾಮಗಾರಿಗಳಿಗೆ ಅಥವಾ ವಾಹನ/ಇತ್ಯಾದಿ ವೆಚ್ಚಗಳಿಗೆ ಉಪಯೋಗಿಸತಕ್ಕದ್ದಲ್ಲ.

6 ಇದಕ್ಕೆ ಪ್ರತ್ಯೇಕವಾದ ಖಾತೆಯನ್ನು ತೆರೆದು ಲೆಕ್ಕಪತ್ರಗಳನ್ನು ನಿರ್ವಹಿಸಿಕೊಂಡು ಹೋಗತಕ್ಕದ್ದು.

7 ಈ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಹಾಜರು ಪಡಿಸಿದ ಬಿಲ್ಲುಗಳಿಗೆ ಮೇಲುರುಜು ಮಾಡುವ ಅಧಿಕಾರವನ್ನು ಜಿಲ್ಲಾಧಿಕಾರಿಗಳು, ಬೀದರ್ ಜಿಲ್ಲೆ ಬೀದರ್ ಇವರಿಗೆ ಮಾತ್ರ ನೀಡಲಾಗಿದೆ.

8 ಈ ಯೋಜನೆಗಳಿಗೆ ಬಿಡುಗಡೆ ಮಾಡಲಾದಂತ ಅನುದಾನದ ಬಗ್ಗೆ ಲೆಕ್ಕ ಪತ್ರಗಳನ್ನು ಸರ್ಕಾರವು ಮಂಜೂರು ಮಾಡುವ ಅಧಿಕಾರಿಯು ಸಮೀಕ್ಷೆಗಾಗಿ ಕರೆದಾಗ ತಪ್ಪದೆ ಒದಗಿಸತಕ್ಕದ್ದು.

9 ಈಗ ಬಿಡುಗಡೆ ಮಾಡಿದ ಹಣವನ್ನು ಈ ಉದ್ದೇಶಿತ ಯೋಜನೆಗಾಗಿ ಮಾತ್ರ ಉಪಯೋಗಿಸತಕ್ಕದ್ದು ಮತ್ತು ಕಾರ್ಯಗತಗೊಳಿಸುವ ಚಟುವಟಿಕೆಯ ಮುಂಗಡ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು ಹಾಗೂ ಈ ಹಣವನ್ನು ಬೇರೆ ಯೋಜನೆಗೆ ವರ್ಗಾಯಿಸತಕ್ಕದ್ದಲ್ಲ.

10 ಉದ್ದೇಶಿತ ಈ ಯೋಜನೆಗೆ ಖರ್ಚಾಗದ ಬಾಬ್ತು ಅನುದಾನವನ್ನು ಉಳಿಸಿಕೊಂಡು ಅದನ್ನು ಸರ್ಕಾರದ ಗಮನಕ್ಕೆ ತರದಿದ್ದಲ್ಲಿ ಸದರಿ ಮೊತ್ತಕ್ಕೆ ಬ್ಯಾಂಕುಗಳು ನೀಡುವ ಸರಳ ಬಡ್ಡಿ ವಿಧಿಸಿ ಸರ್ಕಾರಕ್ಕೆ ಪಾವತಿಸಿ ಕೊಳ್ಳಲಾಗುವುದು.

11 ಜಿಲ್ಲಾಧಿಕಾರಿಗಳು, ಬೀದರ್ ಜಿಲ್ಲೆ, ಬೀದರ್, ಇವರು ಈ ಯೋಜನೆಯನ್ನು ನಿಯಮಗಳ ಪ್ರಕಾರ ಅನುಷ್ಠಾನಗೊಳಿಸಲು ಮತ್ತು ಈ ಯೋಜನೆಗೆ ಬಿಡುಗಡೆ ಮಾಡಲಾದಂತ/ಮಾಡಲಾಗುವ ಎಲ್ಲಾ ಅನುದಾನದ ಸದ್ಬಳಕೆಗೆ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ.

12 ಈ ಯೋಜನೆಗಾಗಿ ಬಿಡುಗಡೆ ಮಾಡಲಾದಂತಹ ಹಣವನ್ನು ಉಪಯೋಗಿಸಿಕೊಂಡಿರುವುದಕ್ಕೆ ಉಪಯೋಗತಾ ಪ್ರಮಾಣ ಪತ್ರವನ್ನು ಹಾಗೂ ಲೆಕ್ಕಪರಿಶೋಧಕರಿಂದ ದೃಢೀಕೃತ ತನಿಖಾ ವರದಿಗಳನ್ನು ಸರ್ಕಾರಕ್ಕೆ ಆಗಿಂದಾಗ್ಗೆ ಸಲ್ಲಿಸತಕ್ಕದ್ದು.

13 ಈ ಯೋಜನೆಗೆ ಈಗ ನೀಡಿದ ಅನುದಾನಕ್ಕಿಂತ ಹೆಚ್ಚಿನ ಅನುದಾನವನ್ನು ರಾಜ್ಯ ಸರ್ಕಾರದಿಂದ ನೀಡುವುದು ಸಾಧ್ಯವಿಲ್ಲ

14 ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರಕ್ಕೆ ಬೇಕಾದ ಸಿಬ್ಬಂದಿ ಮುಂತಾದ ಸೌಕರ್ಯಗಳನ್ನು ಸೊಸೈಟಿಯು ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ಒದಗಿಸುವುದು ಮತ್ತು ಈ ಯೋಜನೆಯು ಪೂರ್ಣವಾಗಿ ಕಾರ್ಯಾಚರಣೆಗೆ ತೊಡಗಿದ 2 ವರ್ಷದವರೆಗೆ ಮಾತ್ರ ಪ್ರತಿ ವರ್ಷ ತಗಲುವ ಆವರ್ತಕ ವೆಚ್ಚ ರೂ. 15.00ಲಕ್ಷವನ್ನು ರಾಜ್ಯ ಸರ್ಕಾರವೇ ಭರಿಸುತ್ತದೆ. ತದನಂತರ ತಗಲುವ ಆವರ್ತಕ ವೆಚ್ಚವನ್ನು ಬೀದರ್ ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿಯೇ ತನ್ನ ಆಂತರಿಕ ಆದಾಯ (ಪ್ರವೇಶ ಶುಲ್ಕ, ಪ್ರಕಟಣೆಗಳು ಇತ್ಯಾದಿ) ಮೂಲಕವೇ ಭರಿಸಿಕೊಂಡು ಹೋಗತಕ್ಕದ್ದು.

15 ಉದ್ದೇಶಿತ ಈ ಯೋಜನೆಯ ನಿವೇಶನವು ಸರ್ಕಾರದ ಸಾಮ್ಯತೆಯಲ್ಲಿರುತ್ತದೆ.

16 ಉಪ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿಯ ಸ್ಥಾಪನೆಗೆ ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ 3 ರಿಂದ 5 ಎಕರೆ ಭೂಮಿಯನ್ನು ಹೆಚ್ಚಿಸಿಕೊಳ್ಳತಕ್ಕದ್ದು.

17 ಕೇಂದ್ರ ಸರ್ಕಾರದ ಪಾಲಾದ ರೂ. 1.00 ಕೋಟಿಗಳ ಅನುದಾನವನ್ನು ಪಡೆಯಲು ಕೂಡಲೇ ಪ್ರಸ್ತಾವನೆ ತಯಾರಿಸಿ ಸರ್ಕಾರಕ್ಕೆ ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.

ಈ ಉದ್ದೇಶಿತ ಯೋಜನೆಯ ಖರ್ಚು ವೆಚ್ಚಗಳನ್ನು ಯೋಜನಾ ಲೆಕ್ಕ ಶೀರ್ಷಿಕೆ 3425–60–200–0–20–(101)(ಯೋಜನೆ) ಜಿಲ್ಲಾ ವಿಜ್ಞಾನ ಕೇಂದ್ರಗಳಿಗೆ ಸಹಾಯಾನುದಾನ ಇದರ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಆಇ 01 ಟಿಎಫ್‌ಪಿ 96, ದಿನಾಂಕ:10.7.96 ಮತ್ತು ಆಇ 1 ಟಿಎಫ್‌ಪಿ 2008, ದಿನಾಂಕ:16.5.2008ರಡಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1640

**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ಕಂದಾಯ ಸಚಿವಾಲಯ**

**ವಿಷಯ:** ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯಲ್ಲಿ ಪೋಡಿ ಪ್ರಕರಣಗಳ ವಿಲೇವಾರಿಗೆ ತತ್ಕಾಲ್ ಪೋಡಿ ಯೋಜನೆಯ ಅನುಷ್ಠಾನಕ್ಕೆ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:** 1. 2008–09ನೇ ಸಾಲಿನ ಆಯವ್ಯಯ ಭಾಷಣ

2. ಸರ್ಕಾರದ ಆದೇಶ ಸಂಇ 142 ಭೂದಾಸ 2008 ದಿನಾಂಕ:12.8.2008 ಹಾಗೂ ದಿನಾಂಕ:23.8.2008 ಮತ್ತು ದಿನಾಂಕ:26.11.2008ರ ತಿದ್ದುಪಡಿ ಆದೇಶಗಳು.

**ಪ್ರಸ್ತಾವನೆ:**

ಮಾನ್ಯ ಮುಖ್ಯಮಂತ್ರಿಗಳು ದಿನಾಂಕ:17.7.2008ರಂದು ಕರ್ನಾಟಕ ವಿಧಾನ ಮಂಡಲದಲ್ಲಿ ಮಂಡಿಸಿದ 2008–2009ನೇ ಸಾಲಿನ ಆಯವ್ಯಯ ಭಾಷಣದಲ್ಲಿ 'ಭೂಮಿ' ಯೋಜನೆಯಡಿ ಭೂದಾಖಲೆಗಳನ್ನು ಗಣಕೀಕರಿಸಿರುವ ಕಾರ್ಯಕ್ಕಾಗಿ ರಾಜ್ಯದ ಕಂದಾಯ ಇಲಾಖೆಯು ಸಾಕಷ್ಟು ಪ್ರಶಂಸೆ ಗಳಿಸಿದೆ. ಕಂದಾಯ ಇಲಾಖೆಯು ಇದೇ ಹಾದಿಯಲ್ಲಿ ಮುಂದುವರಿದು ರೈತಸ್ನೇಹಿಯಾದ "ತತ್ಕಾಲ್ ಪೋಡಿ" ಎನ್ನುವ ಇನ್ನೊಂದು ಯೋಜನೆಯನ್ನು ಜಾರಿಗೊಳಿಸಲು ಉದ್ದೇಶಿಸಿದೆ. ಈ ಯೋಜನೆಯಡಿ ರೈತರಿಂದ ನಿಗದಿತ ಶುಲ್ಕದೊಡನೆ ಸ್ವೀಕೃತವಾಗುವ ಪೋಡಿ ಅರ್ಜಿಗಳನ್ನು ಒಂದು ತಿಂಗಳಿನ ಒಳಗೆ ಮೋಜಣಿ ಮಾಡಿ ಪೋಡಿ ದಾಖಲೆಗಳನ್ನು ಒದಗಿಸಲಾಗುವುದು ಎಂದು ಘೋಷಿಸಿದ್ದಾರೆ.

ಮೇಲೆ ಓದಲಾದ (2) ಸರ್ಕಾರದ ಆದೇಶದಲ್ಲಿ ತತ್ಕಾಲ್ ಪೋಡಿ ಯೋಜನೆಯನ್ನು ಕೆಲವು ಷರತ್ತಿನೊಡನೆ ಮಂಜೂರಾತಿ ನೀಡಿ ಆದೇಶಿಸಲಾಗಿದೆ. ಸದರಿ ಷರತ್ತುಗಳ ಪೈಕಿ ಪೋಡಿ ಪ್ರಕರಣದ ಸ್ಥಿರ ನಿಧಿಗೆ ಸಂಬಂಧಿಸಿದಂತೆ ಪ್ರತಿ ವರ್ಷ ಆಡಿಟ್ ಮಾಡಿಸುವುದು ಮತ್ತು Audited Accounts ನ ಲೆಕ್ಕಪತ್ರಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ರವರ ಅಧ್ಯಕ್ಷತೆಯಲ್ಲಿ ರಚಿಸಲಾಗುವ ಸಮಿತಿ ಮುಂದೆ ಆರ್ಥಿಕ ವರ್ಷ ಮುಕ್ತಾಯವಾದ 3 ತಿಂಗಳೊಳಗಾಗಿ ಮಂಡಿಸಿ ಅನುಮೋದನೆ ಪಡೆಯತಕ್ಕದ್ದು ಎಂದು ಷರತ್ತು ವಿಧಿಸಲಾಗಿದೆ.

ಈ ಅಂಶಗಳ ಹಿನ್ನಲೆಯಲ್ಲಿ ತತ್ಕಾಲ್ ಪೋಡಿ ಯೋಜನೆ ಅನುಷ್ಠಾನ ಹಾಗೂ ಹಣಕಾಸು ಖರ್ಚು ವೆಚ್ಚಗಳ ಮೇಲುಸ್ತುವಾರಿಗೆ, ಆರ್ಥಿಕ ಇಲಾಖೆ ಸೂಚಿಸಿರುವಂತೆ, ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆರವರ, ಅಧ್ಯಕ್ಷತೆಯಲ್ಲಿ ತತ್ಕಾಲ್ ಪೋಡಿ ಅನುಷ್ಠಾನ ಪ್ರಗತಿ ಪರಿಶೀಲನಾ ಸಮಿತಿ ಅವಶ್ಯಕತೆಯನ್ನು ಮನಗಂಡ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 142 ಭೂದಾಸ 2008, ಬೆಂಗಳೂರು, ದಿನಾಂಕ:26ನೇ ನವೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ ತತ್ಕಾಲ್ ಪೋಡಿ ಯೋಜನೆ ಯೋಜನೆ ಅನುಷ್ಠಾನ ಹಾಗೂ ಹಣಕಾಸು ಖರ್ಚು ವೆಚ್ಚಗಳ ಮೇಲುಸ್ತುವಾರಿಗೆ ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ಸಮಿತಿಯನ್ನು ರಚಿಸಿ ಆದೇಶಿಸಿದೆ.

ಕೆಳಕಂಡ ಸದಸ್ಯರನ್ನೊಳಗೊಂಡಂತೆ ರಚಿಸಿ ಆದೇಶಿಸಿದೆ.

| | | |
|---|---|---|
| 1 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ, | ಅಧ್ಯಕ್ಷರು |
| 2 | ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು | ಸದಸ್ಯರು |
| 3 | ಸರ್ಕಾರದ ಉಪ ಕಾರ್ಯದರ್ಶಿ(ಭೂಮಾಪನ) ಕಂದಾಯ ಇಲಾಖೆ | ಸದಸ್ಯರು |
| 4 | ಸರ್ಕಾರದ ಉಪ ಕಾರ್ಯದರ್ಶಿ–2 ಆರ್ಥಿಕ ಇಲಾಖೆ | ಸದಸ್ಯರು |
| 5 | ನೋಂದಣಿ ಮತ್ತು ಮುದ್ರಾಂಕ, ಮಹಾಪರಿವೀಕ್ಷಕರು | ಸದಸ್ಯರು |
| 6 | ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ | ಸದಸ್ಯರು |
| 7 | ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಸದಸ್ಯರು |
| 8 | ಉಪ ನಿರ್ದೇಶಕರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು | ಸದಸ್ಯ ಕಾರ್ಯದರ್ಶಿಗಳು |

ಈ ಆದೇಶವನ್ನು ಆರ್ಥಿಕ ಇಲಾಖೆ ಅ.ಟಿ. ಸಂಖ್ಯೆ. FD 963 Exp-7/2008, ದಿನಾಂಕ:6.8.2008ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1641

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂಮಾಪನ)

**ತಿದ್ದುಪಡಿ**

**ಸಂಖ್ಯೆ:ಕಂಇ 142 ಭೂದಾಸ 2008, ಬೆಂಗಳೂರು, ದಿನಾಂಕ:26ನೇ ನವೆಂಬರ್ 2008**

**ವಿಷಯ:** ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯಲ್ಲಿ ಪೋಡಿ ಪ್ರಕರಣಗಳ ವಿಲೇವಾರಿಗೆ "ತತ್ಕಾಲ್ ಪೋಡಿ" ಯೋಜನೆಯ ಬಗ್ಗೆ.

ಸರ್ಕಾರದ ಆದೇಶ ಸಂಖ್ಯೆ:ಕಂಇ 142 ಭೂದಾಸ 2008 ದಿನಾಂಕ:12.8.2008ರ ಆದೇಶ ಭಾಗದ ಷರತ್ತುಗಳ ಕಂಡಿಕೆ 7ರಲ್ಲಿ ನಮೂದಿಸಿರುವ "ಹೊಸ ಪೋಡಿ ಪ್ರಕರಣಗಳಿಂದ ವಸೂಲಿ ಆಗುವ ಹಣದಿಂದ ಉಳಿತಾಯವಾಗುವ ಸರ್ಕಾರದ (Share) ಭಾಗಾಂಶ ಹಣವನ್ನು ಹಳೆಯ ಪೋಡಿ ಕೆಲಸಕ್ಕೆ ಉಪಯೋಗಿಸಿಕೊಳ್ಳಲು ಸರ್ಕಾರವು ಒಪ್ಪಿರುತ್ತದೆ" ಎಂಬುದಕ್ಕೆ ಬದಲಾಗಿ "ಹೊಸ ಪೋಡಿ ಪ್ರಕರಣಗಳಿಂದ ವಸೂಲಿ ಆಗುವ ಹಣದಿಂದ ಅಂದರೆ ತತ್ಕಾಲ್ ಪೋಡಿ ಪ್ರಕರಣಗಳಿಂದ ಬರುವ ಆದಾಯ ಮತ್ತು ಪ್ರಿಮ್ಯುಟೇಷನ್ ಸ್ಕೆಚ್ ಶುಲ್ಕದ ಉಳಿತಾಯದಿಂದ ಸರ್ಕಾರದ (Share) ಭಾಗಾಂಶ ಹಣವನ್ನು ಹಳೆಯ ಪೋಡಿ ಕೆಲಸಕ್ಕೆ ಉಪಯೋಗಿಸಿಕೊಳ್ಳಲು ಸರ್ಕಾರವು ಒಪ್ಪಿರುತ್ತದೆ" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1642

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂಮಾಪನ)

**ಒಳಾಡಳಿತ ಸಚಿವಾಲಯ**

**ವಿಷಯ:** ದಿನಾಂಕ:10–12–2008 ರಿಂದ 12.12.2008 ರವರೆವಿಗೆ ಚಿಕ್ಕಮಗಳೂರು ತಾಲ್ಲೂಕಿನ ಐ.ಡಿ. ಪೀಠದಲ್ಲಿ ನಡೆಯುವ "ದತ್ತ ಜಯಂತಿ" ಕಾರ್ಯಕ್ರಮದ ಹಿನ್ನಲೆಯಲ್ಲಿ ತಾತ್ಕಾಲಿಕ ಕಾರಾಗೃಹ ಸ್ಥಾಪಿಸುವ ಬಗ್ಗೆ–ಆದೇಶ

**ಓದಲಾಗಿದೆ:** ಜಿಲ್ಲಾ ದಂಡಾಧಿಕಾರಿ ಮತ್ತು ಜಿಲ್ಲಾಧಿಕಾರಿ, ಚಿಕ್ಕಮಗಳೂರು ಜಿಲ್ಲೆ ಚಿಕ್ಕಮಗಳೂರು ಇವರ ಪತ್ರ ಸಂಖ್ಯೆ:ಜೆ1/ಎಂಎಜಿ (ದತ್ತ ಜಯಂತಿ) 241/2008–09, ದಿನಾಂಕ:27.11.2008.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:27.11.2008ರ ಪತ್ರದಲ್ಲಿ ಚಿಕ್ಕಮಗಳೂರು ಜಿಲ್ಲೆಯ ಜಿಲ್ಲಾ ದಂಡಾಧಿಕಾರಿಗಳು, ಚಿಕ್ಕಮಗಳೂರು ತಾಲ್ಲೂಕಿನ ಐ.ಡಿ.ಪೀಠ ಗ್ರಾಮದಲ್ಲಿ ದಿನಾಂಕ:10.12.2008 ರಿಂದ 12.12.2008 ರವರೆವಿಗೆ ಶ್ರೀ ಗುರುದಸತ್ತಾತ್ರೇಯ ಬಾಬಾ ಬುಡನ್‌ಸ್ವಾಮಿ ದರ್ಗಾದಲ್ಲಿ "ದತ್ತ ಜಯಂತಿ" ಎಂಬ ಕಾರ್ಯಕ್ರಮವನ್ನು ಕೆಲ ಸಂಘಟನೆಗಳು ನಡೆಸುವ ಯೋಜನೆ ಇದೆ. ಈ ಸಂದರ್ಭದಲ್ಲಿ ಜಿಲ್ಲೆಯಾದ್ಯಂತ ಶಾಂತಿ ಸುವ್ಯವಸ್ಥೆಯನ್ನು ಕಾಪಾಡುವ ಪ್ರಯುಕ್ತ ಈ ಕಾರ್ಯಕ್ರಮಕ್ಕೆ ಹೊರ ಜಿಲ್ಲೆಗಳಿಂದಲೂ ಸಂಘಟನೆಕಾರರು ಆಗಮಿಸುವ ಸಂಭವವಿದ್ದು, ಜಿಲ್ಲೆಯಲ್ಲಿ ಶಾಂತಿಯನ್ನು ಕದಡುವ ಯಾವುದೇ ಅವಕಾಶ ನೀಡದಂತೆ ಮುಂಜಾಗ್ರತಾ ಬಂಧನ ಕ್ರಮವನ್ನು ಸಹ ಕೈಗೊಳ್ಳುವುದು ಅನಿವಾರ್ಯವಾಗುತ್ತದೆ. ಅಂತಹ ಸಂಘಟನೆಯ ಚಳುವಳಿಗಾರರನ್ನು ಚಿಕ್ಕಮಗಳೂರು ಜಿಲ್ಲಾ ಕಾರಾಗೃಹದಲ್ಲಿ ಬಂಧನದಲ್ಲಿಡಲು ಸ್ಥಳಾವಕಾಶದ ತೊಂದರೆಗಳಿವೆ, ಆದುದರಿಂದ ಕರ್ನಾಟಕ ಕಾರಾಗೃಹಗಳ ನಿಯಮ, 1974 ನಿಯಮ (3)ರನ್ವಯ ತಾತ್ಕಾಲಿಕ ವಿಶೇಷ ಕಾರಾಗೃಹವೆಂದು ವ್ಯವಸ್ಥೆ ಮಾಡಲು ಅವಕಾಶವಿರುವುದರಿಂದ ಚಿಕ್ಕಮಗಳೂರುನಲ್ಲಿ ಈ ಕೆಳಕಂಡ ಸ್ಥಳವನ್ನು ವಿಶೇಷ ತಾತ್ಕಾಲಿಕ ಜೈಲುಗಳನ್ನಾಗಿ ನಿರ್ಮಿಸಲು ಹಾಗೂ ಭದ್ರತಾ ವ್ಯವಸ್ಥೆಯನ್ನು ಮಾಡಲು ಸರ್ಕಾರದ ಆದೇಶವನ್ನು ಕೋರಿರುತ್ತಾರೆ:

ಜಿಲ್ಲಾ ಕಾರಾಗೃಹ ಉದ್ದೇಶಿತ ಕಟ್ಟಡ
ತರೀಕೆರೆ ರಸ್ತೆ,
ಮಹಾತ್ಮ ಗಾಂಧಿ ಪಾರ್ಕ್ ಹಿಂಭಾಗ
ರತ್ನಗಿರಿ ಬೋರೆ
ಚಿಕ್ಕಮಗಳೂರು.

ಚಿಕ್ಕಮಗಳೂರು ಜಿಲ್ಲೆಯ ಜಿಲ್ಲಾ ದಂಡಾಧಿಕಾರಿ ಮತ್ತು ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 315 ಪಿಆರ್‌ಎ 2008, ಬೆಂಗಳೂರು, ದಿನಾಂಕ:5ನೇ ಡಿಸೆಂಬರ್ 2008**

ಚಿಕ್ಕಮಗಳೂರು ತಾಲ್ಲೂಕಿನ ಐ.ಡಿ. ಪೀಠ ಗ್ರಾಮದಲ್ಲಿ ದಿನಾಂಕ:10–12–2008 ರಿಂದ 12.12.2008 ರವರೆವಿಗೆ ಶ್ರೀ ಗುರುದತ್ತಾತ್ರೇಯ ಬಾಬಾ ಬುಡನ್ ಸ್ವಾಮಿ ದರ್ಗಾದಲ್ಲಿ "ದತ್ತ ಜಯಂತಿ" ಎಂಬ ಕಾರ್ಯಕ್ರಮವು ನಡೆಯುವ ಹಿನ್ನಲೆಯಲ್ಲಿ ಮುಂಜಾಗ್ರತೆಯ ಕ್ರಮವಾಗಿ ಶಾಂತಿಯನ್ನು ಕಾಪಾಡುವ ಹಿತದೃಷ್ಟಿಯಿಂದ ಬಂಧನಕ್ಕೊಳಪಡುವ ವ್ಯಕ್ತಿಗಳನ್ನು ಬಂಧಿಸಲು ಕರ್ನಾಟಕ ಕಾರಾಗೃಹಗಳ ನಿಯಮ 1974ರ ನಿಯಮ (3)ರ ರೀತ್ಯಾ ಈ ಕೆಳಗಿನ ಕಟ್ಟಡವನ್ನು ದಿನಾಂಕ:10–12–2008ರಿಂದ 12.12.2008 ರವರೆವಿಗೆ ತಾತ್ಕಾಲಿಕೆ ವಿಶೇಷ ಕಾರಾಗೃಹವೆಂದು ಘೋಷಿಸಲು ಸರ್ಕಾರದ ಮಂಜೂರಾತಿ ನೀಡಿದೆ:

ಜಿಲ್ಲಾ ಕಾರಾಗೃಹ ಉದ್ದೇಶಿತ ಕಟ್ಟಡ,
ತರೀಕೆರೆ ರಸ್ತೆ,
ಮಹಾತ್ಮ ಗಾಂಧಿ ಪಾರ್ಕ್ ಹಿಂಭಾಗ,
ರತ್ನಗಿರಿಬೋರೆ,
ಚಿಕ್ಕಮಗಳೂರು.

ಈ ಕಾರಾಗೃಹದಲ್ಲಿ ಬಂಧಿತರಾಗುವ ಬಂಧಿಗಳಿಗೆ ಊಟ, ಉಪಹಾರ ಇತರೆ ವ್ಯವಸ್ಥೆಗಳನ್ನು ಹಾಗೂ ಬಂಧಿಗಳ ದಾಖಲಾತಿಗಳನ್ನು ಜಿಲ್ಲಾಧಿಕಾರಿಗಳ ವತಿಯಿಂದಲೂ ಹಾಗೂ ತಾತ್ಕಾಲಿಕ ಜೈಲುಗಳ ಭದ್ರತಾ ವ್ಯವಸ್ಥೆಯನ್ನು ಪೊಲೀಸ್ ಇಲಾಖೆಯಿಂದಲೂ ನಿರ್ವಹಿಸಲು ನಿರ್ದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1644

**ಟಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಸೆರೆಮನೆ ಮತ್ತು ಸಿನಿಮಾ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಸಿಆಸುಇ 12 ಹೆಚ್‌ಹೆಚ್‌ಎಲ್ 2007, ಬೆಂಗಳೂರು, ದಿನಾಂಕ:4ನೇ ಡಿಸೆಂಬರ್ 2008**

2008ನೇ ಸಾಲಿನ ಬಕ್ರೀದ್ ಹಬ್ಬವನ್ನು ದಿನಾಂಕ:9.12.2008ರ ಮಂಗಳವಾರದಂದು ಆಚರಿಸುತ್ತಿರುವುದರಿಂದ ಸರ್ಕಾರದ ಅಧಿಸೂಚನೆ –1 ಹಾಗೂ ಅಧಿಸೂಚನೆ–11 ರ ಸಂಖ್ಯೆ :ಸಿಆಸುಇ 12 ಹೆಚ್ ಹೆಚ್‌ಎಲ್ 2007, ದಿನಾಂಕ:4.12.2007ರಲ್ಲಿ ಅನುಕ್ರಮವಾಗಿ ಕ್ರಮ ಸಂಖ್ಯೆ:20 ಹಾಗೂ ಕ್ರಮ ಸಂಖ್ಯೆ:16ರಲ್ಲಿ ತಿಳಿಸಿರುವ ಬಕ್ರೀದ್ ದಿನಾಂಕ:8.12.2008 ಸೋಮವಾರ ಎಂಬುದನ್ನು ಮಾರ್ಪಡಿಸಿ, ಬಕ್ರೀದ್ ಹಬ್ಬದ ಪ್ರಯುಕ್ತ ದಿನಾಂಕ:9.12.2008ರ ಮಂಗಳವಾರದಂದು ಕರ್ನಾಟಕ ರಾಜ್ಯದಾದ್ಯಂತ ಸಾರ್ವಜನಿಕ ರಜೆಯನ್ನು ನೆಗೋಷಿಯೇಬಲ್ ಇನ್‌ಸ್ಟ್ರುಮೆಂಟ್ ಆಕ್ಟ್–1881 ಅಡಿಯಲ್ಲಿಯೂ ಕೂಡ ಅನ್ವಯವಾಗುವಂತೆ ಸರ್ಕಾರವು ಘೋಷಿಸಿದೆ.

ಆದಕಾರಣ ದಿನಾಂಕ:8.12.2008ರ ಸೋಮವಾರವು ಕರ್ತವ್ಯ ದಿನವೆಂದು ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1645

**ಕೆ.ವಿ ರಾಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ರಾಜ್ಯ ಶಿಷ್ಟಾಚಾರ–1)

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಪ್ಲಾಂಟೇಷನ್ ಕಾರ್ಮಿಕರಿಗೆ ಬಿಪಿಎಲ್ ಪಡಿತರ ಚೀಟಿಗಳನ್ನು ನೀಡುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ:ಆನಾಸ 114/ಡಿಆರ್‌ಎ. 2004 ದಿನಾಂಕ;10–1–2005 ಮತ್ತು ಆನಾಸ 244 ಡಿಆರ್‌ಎ 2006 ದಿನಾಂಕ:9.10.2006.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:10.1.2005ರ ಆದೇಶದಲ್ಲಿ ರಾಜ್ಯದಲ್ಲಿ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳನ್ನು ಗುರುತಿಸಿ ಪಡಿತರ ಚೀಟಿಯನ್ನು ಕೊಡುವಲ್ಲಿ ಕೆಲವು ಬಡ ಅರ್ಹ ಕುಟುಂಬಗಳನ್ನು ಕೈಬಿಟ್ಟಿದ್ದು ಅನರ್ಹ ಕುಟುಂಬಗಳು ಪಡಿತರ ಚೀಟಿಯನ್ನು ಹೊಂದಿರುವುದಾಗಿ ಸಾರ್ವಜನಿಕರಿಂದ/ ಜನಪ್ರತಿನಿಧಿಗಳಿಂದ ದೂರುಗಳು ಬಂದಿರುವುದನ್ನು ಗಮನಿಸಿ ರಾಜ್ಯ ಸರ್ಕಾರವು ಅರ್ಹ ಕುಟುಂಬಗಳಿಗೆ ಪಡಿತರ ಚೀಟಿಯನ್ನು ನೀಡಲು ಗ್ರಾಮಪಟ್ಟಣ ಪ್ರದೇಶದ ವಾರ್ಡುಗಳಲ್ಲಿ ಪಾರದರ್ಶಕ ರೀತಿಯಲ್ಲಿ ಮನೆ ಮನೆ ಸಮೀಕ್ಷೆ ನಡೆಸಿ ಕೆಲವೊಂದು ಮಾನದಂಡಗಳನ್ನು ಅನುಸರಿಸಿ ಅರ್ಹ ಕುಟುಂಬಗಳನ್ನು ಗುರುತಿಸಿ ಅವರುಗಳಿಗೆ ಬಿಪಿಎಲ್/ಎಪಿಎಲ್ ಕಾರ್ಡು ವಿತರಿಸಲು ಆದೇಶ ಹೊರಡಿಸಲಾಗಿರುತ್ತದೆ.

ಈ ಮಾನದಂಡಗಳನ್ನು ಪ್ಲಾಂಟೇಷನ್ ಕಾರ್ಮಿಕರಿಗೆ ಬಿಪಿಎಲ್ ಪಡಿತರ ಚೀಟಿ ಪಡೆಯಲು ಸಾಧ್ಯವಾಗದ ಕಾರಣ ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತ ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಎಫ್‌ಸಿಎಸ್ 178 ಡಿಆರ್ಎ 2008, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2008**

ಮೇಲೆ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

ಬಿಪಿಎಲ್ ಪಡಿತರ ಚೀಟಿಗಳನ್ನು ಪಡೆಯುವುದಕ್ಕಾಗಿ ಹಾಲಿ ನಿಗಧಿಪಡಿಸಲಾದ ವಾರ್ಷಿಕ ವರಮಾನ ಮಿತಿಯನ್ನು ಸಡಿಲಿಸಿ ಪ್ಲಾಂಟೇಷನ್ ಕಾರ್ಮಿಕರಿಗೆ ಬಿಪಿಎಲ್ ಪಡಿತರ ಚೀಟಿಗಳನ್ನು ನೀಡಲು ತೀರ್ಮಾನಿಸಿದೆ.

ಉಳಿದಂತೆ ಕ್ರಮವಾಗಿ ಸರ್ಕಾರಿ ಆದೇಶ ಸಂಖ್ಯೆ. ಆನಾಸ, 114/ಡಿಆರ್ಎ 2004 ದಿನಾಂಕ:10–1–2005ರಲ್ಲಿನ ಮತ್ತು ಆನಾಸ 244 ಡಿಆರ್ಎ 2006 ದಿನಾಂಕ:9.10.2006ರ ಆದೇಶ ಭಾಗದಲ್ಲಿನ 03 ಅಂಶಗಳಲ್ಲಿ ರೂಪಿಸಿದ ಮಾನ ದಂಡಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1646

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಆಹಾರ, ನಾಗರೀಕ ಸರಬರಾಜು ಮತ್ತು

ಗ್ರಾಹಕರ ವ್ಯವಹಾರಗಳ ಇಲಾಖೆ

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಡಾ: ಗಣೇಶ್‌ಕುಮಾರ್ ಶೆಟ್ಟಿ, ವೈದ್ಯಾಧಿಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರ ಸಿದ್ದಾಪುರ, ಉಡುಪಿ ಜಿಲ್ಲೆ ಇವರ ಅನಧಿಕೃತ ಗೈರುಹಾಜರಿ ಸಂಬಂಧ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ:**

1. ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರ ಕಾರಣ ಕೇಳುವ ನೋಟೀಸ್ ಸಂಖ್ಯೆ:ಡಿಪಿಜಿ/ಮೈವಿ/ಉ/06–07 ದಿನಾಂಕ:12.6.2007.
2. ಡಾ: ಗಣೇಶ್‌ಕುಮಾರ್ ಶೆಟ್ಟಿ ವೈದ್ಯಾಧಿಕಾರಿ ರವರ ರಕ್ಷಣಾ ಹೇಳಿಕೆ ದಿನಾಂಕ:25.6.2007
3. ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರ ಪ್ರಸ್ತಾವನೆ ದಿನಾಂಕ:26.6.2008.

**ಪ್ರಸ್ತಾವನೆ:**

ಡಾ: ಗಣೇಶ್‌ಕುಮಾರ್ ಶೆಟ್ಟಿ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ ಸಿದ್ದಾಪುರ, ಉಡುಪಿ ಜಿಲ್ಲೆ ಇವರು ದಿನಾಂಕ:24.11.2003 ರಂದು ಸರ್ಕಾರಿ ಸೇವೆಗೆ ಸೇರಿದ್ದು, ಖಾಯಂ ಪೂರ್ವ ಅವಧಿ ಘೋಷಣೆಯಾಗಿದ್ದರೂ ಸಹ ದಿನಾಂಕ:19.2.2006 ರಿಂದ ದಿನಾಂಕ:3.6.2007ರ ವರೆಗೆ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಿಯಾಗಿ ದಿನಾಂಕ:4.6.2007 ರಿಂದ 8.12.2007ರ ವರೆಗೆ ಕರ್ತವ್ಯ ನಿರ್ವಹಿಸಿ, ದಿನಾಂಕ:9.12.2007ರಿಂದ ಈವರೆವಿಗೂ ಎರಡನೇ ಭಾರಿಗೆ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವ ಆರೋಪಕ್ಕೆ ಸಂಬಂಧಿಸಿದಂತೆ ಸದರಿ ವೈದ್ಯರಿಗೆ ಶಿಸ್ತುಕ್ರಮ ಜರುಗಿಸುವ ಸಲುವಾಗಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ರವರು ಮೇಲೆ (1)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಜಾರಿಗೊಳಿಸಿ ಇವರ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ವಿವರಣೆ ಸಲ್ಲಿಸುವಂತೆ ನಿರ್ದೇಶಿಸಿದ್ದರು.

ಡಾ: ಗಣೇಶ್‌ಕುಮಾರ್ ಶೆಟ್ಟಿ, ವೈದ್ಯಾಧಿಕಾರಿಯವರು ದಿನಾಂಕ:12.6.2007ರ ಆಯುಕ್ತರ ನೋಟಿಸಿಗೆ ಮೇಲೆ (2)ರಲ್ಲಿ ಓದಲಾದ ಪತ್ರದ ಮೂಲಕ ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದು, ತಮ್ಮ ಮೇಲಿನ ಆರೋಪಗಳನ್ನು ಒಪ್ಪಿಕೊಂಡಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರು ತಮ್ಮ ಪತ್ರದಲ್ಲಿ ಡಾ:ಗಣೇಶ್‌ಕುಮಾರ್ ಶೆಟ್ಟಿ, ವೈದ್ಯಾಧಿಕಾರಿಯವರು ಅನಧಿಕೃತ ಗೈರಹಾಜರಿ ಅವಧಿಯಲ್ಲಿ ಇಲಾಖೆ ಮತ್ತು ಸರ್ಕಾರದ ಅನುಮತಿ ಇಲ್ಲದೆ. ಉನ್ನತ ವ್ಯಾಸಂಗ ಮಾಡಿ, ಇವರು ಖಾಯಂಪೂರ್ವ ಸೇವಾವಧಿಯಲ್ಲಿಯೇ ಅನಧಿಕೃತ ಗೈರುಹಾಜರಿಯಾಗಿರುವುದರಿಂದ ಕಠಿಣ ದಂಡನೆ ವಿಧಿಸಲು ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

ಸರ್ಕಾರವು ಆಯುಕ್ತರ ಪ್ರಸ್ತಾವನೆ, ಆರೋಪಿತರ ರಕ್ಷಣಾ ಹೇಳಿಕೆ, ಸಂಬಂಧಿಸಿದ ದಾಖಲಾತಿಗಳನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಡಾ; ಗಣೇಶ್ ಕುಮಾರ್ ಶೆಟ್ಟಿ ವೈದ್ಯಾಧಿಕಾರಿ ಇವರು ಒಬ್ಬ ಜವಾಬ್ದಾರಿಯುತ ಪತ್ರಾಂಕಿತ ಅಧಿಕಾರಿಯಾಗಿದ್ದು, ಕಾರಣ ನೀಡದೆ ಯಾವುದೇ ರಜೆ ಅರ್ಜಿಯನ್ನು ಸಲ್ಲಿಸದೆ ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೆ ಸರ್ಕಾರಿ ಸೇವೆಗೆ ದೀರ್ಘಾವಧಿಯ ಕಾಲ ಅನಧಿಕೃತವಾಗಿ ಗೈರುಹಾಜರಿಯಾಗಿರುತ್ತಾರೆ. ಇವರ ಸೇವಾ ವಿವರವನ್ನು ಪರಿಶೀಲಿಸಲಾಗಿದ್ದು, ಸದರಿಯವರ ಖಾಯಂ ಪೂರ್ವ ಸೇವಾವಧಿ ಘೋಷಣೆಯಾಗಿರುವುದಿಲ್ಲ. ಇವರು ಖಾಯಂ ಪೂರ್ವಸೇವಾವಧಿಯಲ್ಲಿಯೇ ಸರ್ಕಾರಿ ನೌಕರರಿಗೆ ತಕ್ಕದ್ದಲ್ಲದ ರೀತಿಯಲ್ಲಿ ವರ್ತಿಸಿರುವುದು ದಾಖಲಾತಿಗಳಿಂದ ದೃಢಪಡುತ್ತದೆ. ಆದ್ದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೆಷನರಿ) ನಿಯಮಾವಳಿಗಳು 1977ರ ನಿಯಮ–6 ರಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 298 ಎಂಎಸ್ಎ 2008, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಸರ್ಕಾರವು ಡಾ: ಗಣೇಶ್‌ಕುಮಾರ್ ಶೆಟ್ಟಿ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ ಸಿದ್ದಾಪುರ, ಉಡುಪಿ ಜಿಲ್ಲೆ ಇವರು ಸರ್ಕಾರಿ ಸೇವೆಗೆ ಗೈರುಹಾಜರಾಗಿರುವುದರಿಂದ ಇವರು ಖಾಯಂ ಪೂರ್ವಸೇವಾವಧಿಯಲ್ಲಿಯೇ ಸರ್ಕಾರಿ ನೌಕರರಿಗೆ ತಕ್ಕದ್ದಲ್ಲದ ರೀತಿಯಲ್ಲಿ ವರ್ತಿಸಿ, ಕರ್ತವ್ಯಚ್ಯುತಿ ಎಸಗಿರುವುದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೆಷನರಿ) ನಿಯಮಾವಳಿಗಳು 1977ರ, ನಿಯಮ–6 ರಡಿಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1647

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**ಸಹಕಾರ ಸಚಿವಾಲಯ**

**ವಿಷಯ:** ಕೋಲಾರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ಕೋಲಾರ ಇದರ ವಿಶೇಷಾಧಿಕಾರಿ ಅವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸಿಓ 19 ಸಿಎಲ್ಎಂ 2007, ದಿನಾಂಕ:20.2.2007.

2. ವ್ಯವಸ್ಥಾಪಕ ನಿರ್ದೇಶಕರು, ಕೋಲಾರ ಡಿ.ಸಿ.ಸಿ. ಬ್ಯಾಂಕ್ ರವರ ಪತ್ರ ಸಂಖ್ಯೆ:ಯೋ &ಅ 2965–70/2008–09, ದಿನಾಂಕ:7.8.2008 ಮತ್ತು 29.8.2008.

3. ಸಹಕಾರ ಸಂಘಗಳ ಜಂಟಿ ನಿಬಂಧಕರು (ಪತ್ತು) ಪತ್ರ ಸಂಖ್ಯೆ: ಸಿಆರ್‌ಡಿ/ಸಿಎಬಿ–1/81/ 2003–04, ದಿನಾಂಕ:9.9.2008

**ಪ್ರಸ್ತಾವನೆ:**

ಕೋಲಾರ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ ಆಡಳಿತ ಮಂಡಳಿಯನ್ನು ರದ್ದುಗೊಳಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 31(1)ರ ಪ್ರಕಾರ ಕೋಲಾರ ಜಿಲ್ಲಾಧಿಕಾರಿಯನ್ನು ಬ್ಯಾಂಕಿನ ವಿಶೇಷಾಧಿಕಾರಿಯನ್ನಾಗಿ ನೇಮಿಸಿದ್ದು, ವಿಶೇಷಾಧಿಕಾರಿಯ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸಿದ್ದು ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ವಿಶೇಷಾಧಿಕಾರಿಯವರ ಅವಧಿಯನ್ನು ದಿನಾಂಕ:1.4.2007 ರಿಂದ 31.3.2008ರ ವರೆಗೆ ವಿಸ್ತರಿಸಲು ಅನುವಾಗುವಂತೆ ಅನುಮತಿ ನೀಡಲಾಗಿದೆ.

ಜಿಲ್ಲೆಯಲ್ಲಿನ ಪ್ರಾಥಮಿಕ ಕೃಷಿ ಪತ್ತಿನ ಸೇವಾ ಸಹಕಾರ ಸಂಘಗಳ ಸಾಲ ವಸೂಲಾತಿಯು ತೀವ್ರವಾಗಿ ಕುಂಠಿತಗೊಂಡಿದ್ದು, ಅವುಗಳು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ರ ಪ್ರಕಾರ ಕೋಲಾರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಆಡಳಿತ ಸಮಿತಿ ಚುನಾವಣೆಯಲ್ಲಿ ಭಾಗವಹಿಸಲು ಹಾಗೂ ಮತ ಚಲಾಯಿಸಲು ಸಾಧ್ಯವಾಗುವುದಿಲ್ಲವೆಂದೂ, ಬ್ಯಾಂಕಿನ ಹಣಕಾಸಿನ ಪರಿಸ್ಥಿತಿಯಲ್ಲಿ ಸುಧಾರಣೆಯಾಗದೆ ಲಿಕ್ವಿಡಿಟಿ ಕೊರತೆಯನ್ನು ಮತ್ತು ತೀವ್ರ ಹಣಕಾಸು ಮುಗ್ಗಟ್ಟನ್ನು ಬ್ಯಾಂಕು ಎದುರಿಸುತ್ತಿದ್ದು ಬ್ಯಾಂಕಿನ ನೆಟ್ ವರ್ತ್ ಸ್ಥಿತಿ ರೂ (–) 3811.94 ಲಕ್ಷಗಳಿದ್ದು, ಬ್ಯಾಂಕಿಂಗ್ ನಿಯಂತ್ರಣ ಅಧಿನಿಯಮ 1949ರ ಪ್ರಕರಣ 11(1) ಅನ್ನು ಪಾಲನೆ ಮಾಡಲು ಸದರಿ ಬ್ಯಾಂಕು ವಿಫಲವಾಗಿರುತ್ತದೆಂದೂ ಮತ್ತು ರಾಜ್ಯದಲ್ಲಿ ಪ್ರೊಫೆಸರ್ ಎ ವೈದ್ಯನಾಥನ್ ಸಮಿತಿಯ

ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸುತ್ತಿದ್ದು ಅದರನುಸಾರ ಆಡಳಿತ ಸಮಿತಿಯನ್ನು ಪುನರ್‌ರಚಿಸಬೇಕಾಗುವುದರಿಂದ ವಿಶೇಷಾಧಿಕಾರಿಯವರ ಅವಧಿಯನ್ನು ದಿನಾಂಕ:1.4.2008 ರಿಂದ ಮುಂದಿನ ಒಂದು ವರ್ಷದ ಅವಧಿಗೆ ವಿಸ್ತರಿಸಲು ಸಹಕಾರ ಸಂಘಗಳ ನಿಬಂಧಕರು ಮೇಲೆ ಓದಲಾದ (3)ರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಒ 164 ಸಿಎಲ್‌ಎಂ 2008, ಬೆಂಗಳೂರು, ದಿನಾಂಕ: 30ನೇ ಸೆಪ್ಟೆಂಬರ್ 2008**

ಮೇಲೆ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕೋಲಾರ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ ವಿಶೇಷಾಧಿಕಾರಿಯವರ ಅವಧಿಯನ್ನು ದಿನಾಂಕ:1.4.2008 ರಿಂದ 31.3.2009ರ ವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರ ಅಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಸದರಿ ಅಧಿನಿಯಮ ಪ್ರಕರಣ 31(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಕೋಲಾರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿಯಮಿತ, ಕೋಲಾರ ಇದಕ್ಕೆ ಅನ್ವಯವಾಗತಕ್ಕದೆಂದು ನಿರ್ದೇಶಿಸುತ್ತದೆ ಎಂದರೆ;

**31ರ ಪ್ರಕರಣದಲ್ಲಿ,**

(1)ನೇ ಉಪ ಪ್ರಕರಣದಲ್ಲಿರುವ "ಒಂದು ವರ್ಷ" ಎಂಬ ಪದಕ್ಕೆ ಬದಲಾಗಿ "ಐವತ್ತು ತಿಂಗಳು" ಎಂಬುದಾಗಿ ಪ್ರತಿಯೋಜಿಸತಕ್ಕದ್ದು.

ಸೂಚನೆ: ಪ್ರಕರಣ 31(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ;31.3.2009ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 31(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1447

**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

**ವಿಷಯ:** ಕೊನ್ನಾಪುರ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮಳವಳ್ಳಿ ತಾಲ್ಲೂಕು ಇದರ ವಿಶೇಷಾಧಿಕಾರಿಗಳ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ಅಪರ ನಿಬಂಧಕರ ಪತ್ರ ಸಂಖ್ಯೆ:ಡಿಎವೈ–1/ಜೆಎಂಸಿ/32/2008–09, ದಿನಾಂಕ:4.9.2008.

**ಪ್ರಸ್ತಾವನೆ:**

ಕೊನ್ನಾಪುರ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮಳವಳ್ಳಿ ತಾಲ್ಲೂಕು ಇದಕ್ಕೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಪ್ರಕರಣ 31ರನ್ವಯ ದಿನಾಂಕ:23.9.2006 ರಿಂದ 2 ತಿಂಗಳ ಅವಧಿಗೆ ವಿಶೇಷಾಧಿಕಾರಿಯನ್ನು ನೇಮಕ ಮಾಡಲಾಗಿದ್ದು, ತದನಂತರ ದಿನಾಂಕ:23.11.2006 ರಿಂದ 22.3.2008 ರವರೆಗೆ ಹಂತಹಂತವಾಗಿ ವಿಶೇಷಾಧಿಕಾರಿ ಅವಧಿಯನ್ನು ವಿಸ್ತರಿಸಲಾಗಿರುತ್ತದೆ. ದಿನಾಂಕ:13.6.2008ರಂದು ನಡೆದ ವಿಶೇಷಾಧಿಕಾರಿಗಳ ಸಭೆಯಲ್ಲಿ ಸಂಘದ ಆಡಳಿತ ಮಂಡಳಿಗೆ ಮರು ಚುನಾವಣೆ ನಡೆಸಲು ಚುನಾವಣಾಧಿಕಾರಿ ನೇಮಕವಾಗಿದ್ದು, ಸಂಘದ ಸದಸ್ಯರಾದ ಶ್ರೀ ಚಿಕ್ಕತಿಮ್ಮೇಗೌಡ ಇವರು ಚುನಾವಣಾಧಿಕಾರಿ ನೇಮಕಾತಿ ಆದೇಶಕ್ಕೆ ತಡೆಯಾಜ್ಞೆ ತಂದಿರುವುದರಿಂದ ಹಾಗೂ ಸದರಿ ಮೇಲ್ಮನವಿಯು ಇಲ್ಲಿಯವರೆಗೂ ಇತ್ಯರ್ಥವಾಗದೇ ಇರುವುದರಿಂದ ಚುನಾವಣೆಯನ್ನು ನಡೆಸಲು ಸಾಧ್ಯವಾಗಿರುವುದಿಲ್ಲವಾದ್ದರಿಂದ ದಿನಾಂಕ:23.3.2008 ರಿಂದ 22.12.2008 ಅವಧಿಯವರೆಗೆ ವಿಶೇಷಾಧಿಕಾರಿಗಳ ಅವಧಿಯನ್ನು ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ವಿನಾಯಿತಿ ನೀಡಲು ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ಅಪರ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಒ 169 ಸಿಎಲ್ ಎಂ 2008, ಬೆಂಗಳೂರು, ದಿನಾಂಕ:6ನೇ ಅಕ್ಟೋಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಸಂಗತಿಗಳ ಹಿನ್ನಲೆಯಲ್ಲಿ ಕೊನ್ನಾಪುರ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮಳವಳ್ಳಿ ತಾಲ್ಲೂಕು ಇದರ ವಿಶೇಷಾಧಿಕಾರಿಯವರ ಅವಧಿಯನ್ನು ದಿನಾಂಕ:23.3.2008 ರಿಂದ 22.12.2008 ರವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 31(1) ಈ ಕೆಳಕಂಡ

ಮಾರ್ಪಾಟುಗಳೊಂದಿಗೆ ಕೊನ್ನಾಪುರ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮಳವಳ್ಳಿ ತಾಲ್ಲೂಕು ಇದಕ್ಕೆ ಅನ್ವಯವಾಗತಕ್ಕದೆಂದು ನಿರ್ದೇಶಿಸುತ್ತದೆ ಎಂದರೆ;

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 31 ಉಪ ಪ್ರಕರಣ (1)ರಲ್ಲಿನ "ಒಂದು ವರ್ಷ" ಎಂಬ ಪದಗಳಿಗೆ ಬದಲಾಗಿ "ಇಪ್ಪತ್ತೊಂದು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

ಸೂಚನೆ: ಪ್ರಕರಣ 31 ಉಪ –ಪ್ರಕರಣ (1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:22.12.2008 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 31 ಉಪ–ಪ್ರಕರಣ(1)ರಲ್ಲಿನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1448

**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

**ವಿಷಯ:** ದತ್ತಪ್ರಸಾದ್ ಕೋ–ಆಪರೇಟಿವ್ ಹೌಸಿಂಗ್ ಸೊಸೈಟಿ ನಿ., ಬೆಂಗಳೂರು ಇದರ ವ್ಯವಹಾರಗಳ ಸಂಬಂಧ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ವಿಚಾರಣೆ ಅವಧಿ ವಿಸ್ತರಿಸುವ ಬಗ್ಗೆ

**ಓದಲಾಗಿದೆ:** ಸಹಕಾರ ಸಂಘಗಳ ಅಪರ ನಿಬಂಧಕರ ಪತ್ರ ಸಂಖ್ಯೆ ಹೆಚ್‌ಎಸ್‌ಜಿ–1/41/ಹೆಚ್ ಹೆಚ್ ಎಸ್/2008–09 ದಿನಾಂಕ:14.8.2008.

**ಪ್ರಸ್ತಾವನೆ:**

ದತ್ತಪ್ರಸಾದ್ ಕೋ–ಆಪರೇಟಿವ್ ಹೌಸಿಂಗ್ ಸೊಸೈಟಿ ನಿ., ಬೆಂಗಳುರು ಇದರ ವ್ಯವಹಾರಗಳ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ಪ್ರಕಾರ ವಿಚಾರಣೆ ನಡೆಸಲು ಬೆಂಗಳೂರು ಪ್ರಾಂತದ ಸಹಕಾರ ಸಂಘಗಳ ಜಂಟಿ ನಿಬಂಧಕರು ದಿನಾಂಕ:27.12.2006ರಂದು ಆದೇಶಿಸಿದ್ದು ವಿಚಾರಣಾಧಿಕಾರಿಯವರ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸಲಾಗಿರುತ್ತದೆ. ವಿಚಾರಣಾಧಿಕಾರಿಯವರ ಅವಧಿಯು ದಿನಾಂಕ:26.6.2008ಕ್ಕೆ ಮುಕ್ತಾಯವಾಗಿರುತ್ತದೆ.

ಸಂಘದವರು ಸಲ್ಲಿಸಿದ ರಿಟ್ ಅರ್ಜಿ ಸಂಖ್ಯೆ:2286/2007ಮತ್ತು11963/2007ಅನ್ನು ದಿನಾಂಕ: 11.4.2008 ರಂದು ಶ್ರೇಷ್ಠ ನ್ಯಾಯಾಲಯವು ಇತ್ಯರ್ಥಪಡಿಸಿ ಸದರಿ ದಿನಾಂಕದಿಂದ ಆರು ತಿಂಗಳ ಒಳಗೆ ವಿಚಾರಣೆಯನ್ನು ಪೂರ್ಣಗೊಳಿಸಲು ಆದೇಶಿಸಿರುವುದಾಗಿ ಸಹಕಾರ ಸಂಘಗಳ ಜಂಟಿ ನಿಬಂಧಕರು ವರದಿ ಮಾಡಿದ್ದಾರೆಂದು ತಿಳಿಸಿ ವಿಚಾರಣಾ ಅವಧಿಯನ್ನು ದಿನಾಂಕ:27.6.2008ರಿಂದ ದಿನಾಂಕ:10–10–2008 ರವರೆಗೆ ವಿಸ್ತರಿಸಲು ಪ್ರಕರಣ 121ರಡಿಯಲ್ಲಿ ಆದೇಶ ಹೊರಡಿಸಬೇಕೆಂದು ಸಹಕಾರ ಸಂಘಗಳ ಅಪರ ನಿಬಂಧಕರು ಮೇಲೆ ಓದಲಾದ ಪತ್ರದಲ್ಲಿ ಕೋರಿದ್ದಾರೆ.

ಸಹಕಾರ ಸಂಘಗಳ ಅಪರ ನಿಬಂಧಕರ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಒ 111 ಸಿಹೆಚ್‌ಎಸ್ 2008, ಬೆಂಗಳೂರು, ದಿನಾಂಕ: 7ನೇ ಅಕ್ಟೋಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಸಂಗತಿಗಳ ಹಿನ್ನಲೆಯಲ್ಲಿ ದತ್ತಪ್ರಸಾದ್ ಕೋ–ಆಪರೇಟಿವ್ ಹೌಸಿಂಗ್ ಸೊಸೈಟಿ ಲಿ., ಬೆಂಗಳೂರು ಇದರ ವ್ಯವಹಾರಗಳ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರಡಿ ಆದೇಶಿಸಿರುವ ವಿಚಾರಣೆಯ ಅವಧಿಯನ್ನು ದಿನಾಂಕ:27.6.2008 ರಿಂದ ದಿನಾಂಕ:10.10.2008 ರವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 64(2–ಎ) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ದತ್ತಪ್ರಸಾದ್ ಕೋ–ಆಪರೇಟಿವ್ ಹೌಸಿಂಗ್ ಸೊಸೈಟಿ ನಿ., ಬೆಂಗಳೂರು ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ. ಎಂದರೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ಉಪಪ್ರಕರಣ (2ಎ)ರಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "ಹತ್ತು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** 2) ಪ್ರಕರಣ 64 ಉಪ–ಪ್ರಕರಣ (2–ಎ)ಕ್ಕೆ ಮಾಡಿದ ಮಾರ್ಪಾಡು ದಿನಾಂಕ:10–10–2008 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 64 ಉಪ–ಪ್ರಕರಣ (2–ಎ)ರಲ್ಲಿನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1449

**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

**ಇಂಧನ ಸಚಿವಾಲಯ**

**ವಿಷಯ:** ಶ್ರೀ ಎಸ್.ಎಂ. ಜಾಮದಾರ್ ಭಾ.ಆ.ಸೇ., ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ಇವರು ಮೆ:ಕೋಲ್ ಟ್ರಾನ್ಸ್ ಇವರಿಂದ 'ಕೋಲ್ ಟ್ರೇಡಿಂಗ್ ಮತ್ತು ರಿಸ್ಕ್ ಮ್ಯಾನೇಜ್‌ಮೆಂಟ್ ಬಗ್ಗೆ ಸಿಂಗಾಪುರದಲ್ಲಿ ಏರ್ಪಡಿಸಿರುವ ತರಬೇತಿಯಲ್ಲಿ ಭಾಗವಹಿಸಲು ಅನುಮತಿ ನೀಡುವ ಬಗ್ಗೆ.

**ಉಲ್ಲೇಖ:** 1. ವ್ಯವಸ್ಥಾಪಕ ನಿರ್ದೇಶಕರು, ಕವಿನಿನಿ ಇವರ ಪತ್ರ ಸಂಖ್ಯೆ:ಎ1 ಆರ್1ಎ (ಪಿಎಸ್) ದಿನಾಂಕ:6.9.2008.

2. ಅನಧಿಕೃತ ಟಿಪ್ಪಣಿ ಸಂಖ್ಯೆ:ಇಎನ್ 127 ಪಿಪಿಸಿ 2008 ದಿನಾಂಕ:19/20.9.2008.

3. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಡಿಪಿಎಆರ್ 188 ಎಸ್‌ಎಂಇ 2008 ದಿನಾಂಕ:14.10.2008.

**ಪ್ರಸ್ತಾವನೆ:**

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಇವರು ಮೆ: ಕೋಲ್ ಟ್ರಾನ್ಸ್ ಇವರು 'ಕೋಲ್ ಟ್ರೇಡಿಂಗ್ ಮತ್ತು ರಿಸ್ಕ್ ಮ್ಯಾನೇಜ್‌ಮೆಂಟ್ ವಿಷಯದ ಬಗ್ಗೆ ಸಿಂಗಾಪುರದಲ್ಲಿ ದಿನಾಂಕ10.11.2008 ರಿಂದ 12.11.2008 ರವರೆವಿಗೆ ಏರ್ಪಡಿಸಿರುವ ತರಬೇತಿ ಕಾರ್ಯಕ್ರಮದಲ್ಲಿ ಭಾಗವಹಿಸಲು ಅನುಮತಿ ನೀಡುವಂತೆ ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಅ.ಟಿ.ಯಲ್ಲಿ ಮೆ:ಕೋಲ್‌ಟ್ರಾನ್ಸ್ ಕಾನ್ಫರೆನ್ಸ್ ಲಿ. ಇವರು ದಿನಾಂಕ;10.11.2008 ರಿಂದ 12.11.2008 ರವರೆವಿಗೆ 3 ದಿನಗಳ ಕಾಲ ಸಿಂಗಪುರದಲ್ಲಿ ಆಯೋಜಿಸಿರುವ ಕೋಲ್ ಟ್ರೇಡಿಂಗ್ ಮತ್ತು ರಿಸ್ಕ್ ಮ್ಯಾನೇಜ್‌ಮೆಂಟ್ ತರಬೇತಿ ಕಾರ್ಯಕ್ರಮಕ್ಕೆ ಶ್ರೀ ಎಸ್.ಎಂ ಜಾಮ್‌ದಾರ್ ಭಾ.ಆ.ಸೇ., ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಇವರನ್ನು ನಿಯೋಜಿಸಲು ಅನುಮತಿ ನೀಡುವಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯನ್ನು ಕೋರಲಾಗಿತ್ತು.

ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ಅ.ಟಿ.ಯಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ದಿನಾಂಕ:10.11.2008 ರಿಂದ 12.11.2008 ರವರೆವಿಗೆ ಸಿಂಗಪುರದಲ್ಲಿ ನಡೆಯುವ ಕೋಲ್ ಟ್ರೇಡಿಂಗ್ ಮತ್ತು ರಿಸ್ಕ್ ಮ್ಯಾನೇಜ್‌ಮೆಂಟ್ ತರಬೇತಿ ಕಾರ್ಯಕ್ರಮಕ್ಕೆ ಶ್ರೀ ಎಸ್.ಎಂ. ಜಾಮ್‌ದಾರ್, ಭಾ.ಆ.ಸೇ., ವ್ಯವಸ್ಥಾಪಕ ನಿರ್ದೇಶಕರು, ಕವಿನಿನಿ ಇವರನ್ನು ನಿಯೋಜಿಸುವ ಪ್ರಸ್ತಾವನೆಗೆ ಸಹಮತಿ ನೀಡಿರುತ್ತದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಇಎನ್ 127 ಪಿಪಿಸಿ 2008 (ಪಿ), ಬೆಂಗಳೂರು, ದಿನಾಂಕ:17ನೇ ಅಕ್ಟೋಬರ್ 2008**

ಶ್ರೀ ಎಸ್.ಎಂ. ಜಾಮ್‌ದಾರ್ ಭಾ.ಆ.ಸೇ., ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಇವರು ದಿನಾಂಕ:10.11.2008 ರಿಂದ 12.11.2008 ರವರೆವಿಗೆ ಸಿಂಗಪುರದಲ್ಲಿ ನಡೆಯುವ 'ಕೋಲ್‌ಟ್ರೇಡಿಂಗ್ ಮತ್ತು ರಿಸ್ಕ್ ಮ್ಯಾನೇಜ್‌ಮೆಂಟ್' ತರಬೇತಿಯಲ್ಲಿ ಬಾಗವಹಿಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮತಿಯನ್ನು ನೀಡಲಾಗಿದೆ.

1 ಅಧಿಕಾರಿಯ ಮೇಲ್ಕಂಡ ವಿದೇಶ ಪ್ರವಾಸಕ್ಕೆ ತಗಲುವ ವೆಚ್ಚವನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವತಿಯಿಂದ ಭರಿಸತಕ್ಕದ್ದು ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 9 ಎಸ್‌ಆರ್‌ಎ 2000 ದಿನಾಂಕ:20.11.2003 ರಲ್ಲಿನ ಸೂಚನೆಗಳನ್ವಯ Perdiems ಅನ್ನು ಮಿತಿಗೊಳಿಸತಕ್ಕದ್ದು.

2 ಸದರಿ ಅಧಿಕಾರಿಯವರು ವಿದೇಶ ಪ್ರವಾಸದಿಂದ ಹಿಂದಿರುಗಿದ 15 ದಿವಸಗಳೊಳಗಾಗಿ ಪ್ರವಾಶದ ವರದಿಯನ್ನು ಸರ್ಕಾರಕ್ಕೆ ಕಡ್ಡಾಯವಾಗಿ ಸಲ್ಲಿಸತಕ್ಕದ್ದು ಇಲ್ಲದಿದ್ದಲ್ಲಿ ಭವಿಷ್ಯದಲ್ಲಿ ಅಧಿಕಾರಿಯವರ ವಿದೇಶ ನಿಯೋಜನೆಯನ್ನು ಅನುಮೋದಿಸಲಾಗುವುದಿಲ್ಲ. ವರದಿಯು 750 ಪದಗಳನ್ನು ಮೀರತಕ್ಕದ್ದಲ್ಲ ಮತ್ತು ಎ–4 ಸೈಜ್‌ನ ಹಾಳೆಯಲ್ಲಿ ಮಂಡಿಸತಕ್ಕದ್ದು.

ಈ ಆದೇಶವನ್ನು ಸಿಆಸು ಇಲಾಖೆ (ಸೇವೆಗಳು)ಯು ಅನಧಿಕೃತ ಟಿಪ್ಪಣಿ ಸಂಖ್ಯೆ:ಡಿಪಿಎಆರ್ 188 ಎಸ್ ಎಂಇ 2008 ದಿನಾಂಕ:14.10.2008 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1430

**ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ